Vol - 8 November 2009 Issue No. 10 Rs. 5.00/-



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine






Sri S.A. Ravindranath, Hon'ble Minister for Agriculture & District Incharge Minister, Davangere released the Brochure on "Kondajji Basappa Scouts & Guides State Training Centre". Sri B.P. Harish, Hon'ble M.L.A, Harihar, Sri Shivananjaiah, Director, Department of Youth Services & Sports, Sri Kondajji B. Shanmukhappa, State Chief Commissioner & Smt Sarojamma Mahantesh, Member of Zilla Panchayath are seen.



Guthi Jambunath, Chief Executive Officer, Zilla nchayath, Davangere Inaugurated the State level outs & Guides Rajyapuraskar Preparatory Camp ld on 12th November 2009 at Kondajji Campus planting a sappling. Sri Polaiah District Social lfare Officer, Sri. Hanumanthappa, President ndajji Grama Panchayath, Sri Mudegowdappa, SCC d Davangere District Officials are seen.




Sri Shivananjaiah, Director, Department of Youth Services & Sports released the Foundation Day Flags on 7th November 2009 at State Headquarters, Bangalore. Sri R.L. Patil, Joint Director (Training), Smt Saroja V.Naidu, Sri Kondajji B. Shanmukhappa, Sri M.A. Khalid, and Prof M.S. Appa are seen



ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ ಗೈಡ್ ಸಂಸ್ಥೆ ಪರವಾಗಿ ನೆರೆ ಪರಿಹಾರ ನಿಧಿಗಾಗಿ ಸಂಗ್ರಹಿಸಿದ ರೂ 54,000/- ಚೆಕ್ಕನ್ನು ಜಿಲ್ಲಾಧಿಕಾರಿಗಳಾದ ಶ್ರೀ ವಿ. ಪೊನ್ನುರಾಜರವರಿಗೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ.ಕೈರನ್ನ ನೀಡಿದರು.



ಚಿತ್ರದುರ್ಗಜಿಲ್ಲಾ ವತಿಯಿಂದ ನೆರೆ ಪರಿಹಾರ ನಿಧಿಗಾಗಿ ಸಂಗ್ರಹಿಸಿದ ರೂ 25,000/-ದ ಚೆಕ್ಕನ್ನು ಅಪರ ಜಿಲ್ಲಾಧಿಕಾರಿಯವರಾದ ಶ್ರೀಮತಿ ನಾದಿಯ ಸುಲ್ತಾನ್ ರವರಿಗೆ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರಾದ ಶ್ರೀ ಕೆ. ಶಂಕ್ರಪ್ಪನವರು ನೀಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.




ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರದ ಸರ್ಕಾರಿ ಪ್ರೌಢಶಾಲೆಯ ಸ್ಕೌಟ್ ಮತ್ತು ಗೈಡ್‌ಗಳು ನೆರೆ ಪರಿಹಾರ ನಿಧಿಗೆ ಸಾರ್ವಜನಿಕರಿಂದ ಹಣ ಸಂಗ್ರಹಿಸುತ್ತಿರುವುದು.



ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳದ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ನೆರೆ ಪರಿಹಾರ ನಿಧಿಗೆ ಹಣ ಸಂಗ್ರಹಿಸುತ್ತಿರುವುದು.



ಕೊಪ್ಪಳ ಜಿಲ್ಲೆಯ ಬನ್ನಿಕಟ್ಟೆಯ ಸರ್ಕಾರಿ ಪ್ರೌಢಶಾಲೆಯ ಗೈಡ್ ಕುಮಾರಿ ಭಾರತಿ ಅವರು ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿದರು. ಚಿತ್ರದಲ್ಲಿ ಸಕ್ಕರೆ ಸಚಿವರಾದ ಸನ್ಮಾನ್ಯ ಶ್ರೀ ಶಿವರಾಜ ತಂಗಡಗಿ, ಶಾಸಕರಾದ ಮಾನ್ಯ ಶ್ರೀ ಕರಡಿ ಸಂಗಣ್ಣ, ಜಿಲ್ಲಾಧಿಕಾರಿಗಳಾದ ಶ್ರೀ ಕೆ.ಎಸ್. ಸತ್ಯಮೂರ್ತಿ ಮತ್ತು ನಗರ ಸಭೆ ಅಧ್ಯಕ್ಷರಾದ ಶ್ರೀ ಚಂದ್ರಶೇಖರ ಕವಲೂರ್ ಅವರುಗಳನ್ನು ಕಾಣಬಹುದು.



ರಾಯಚೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ನಡೆದ ಸ್ಕೌಟ್ಸ್ ಸಂಸ್ಥಾಪನಾ ದಿನದ ಧ್ವಜಾ ಸ್ಟಿಕರ್‌ಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯನವರು ಬಿಡುಗಡೆ ಮಾಡುತ್ತಿರುವುದು. ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.

# Editor's desk



Hello, wish you all happy "**Rajyotsava Day**". This month I would like to share my views on theme of recently held APR Regional Scout Conference in Malaysia "**Scouts -Capital for peace**". How well thoughtout Message as it gives clear message of Scouting.

**Peace is "harmonious relations; freedom from disputes and the absence of mental stress or anxiety"**

**Scouting** is to contribute to the **education of young people,** through a value system based on the Scout Promise and Law, to help **build a better world** where people are self-fulfilled as individuals and play a constructive role in society.

If we put "**Scouting & Peace**" together, we can see the magic of harmonious world.

The greatest challenge that the human race has ever faced still remains: to live in a world free of the threat of violence. Violence is not restricted to times of war; it exists everywhere: in homes, schools and communities. Today terrorism or naxalism has become threat to peace of our society.

When we think about education, we often view school in a traditional, formal sense. Many people believe that true learning can only take place in a formal classroom setting. Others feel education occurs in many different forms and environments.

Friends, if Scouting is really contributing to educate young people around the world, where our values speak lot about building better world, then we are the ambassadors of peace. Each member whether Cub/ Scout / Rover or Bulbul/ Guide/ Ranger or all adults in our movement are messengers of peace.

So whoever is coming in- to fold of Scout / Guide Movement they are entering" Capital of peace".

Friends, we are doing great service to human in promoting and building peace. Today our country is going through crisis with the problems of conflicts like terrorism or naxalism or many more issues. Let us as Scouts & Guides take up challenge to play role of peace promoters, promote activities at levels by giving clear message "**Scouts - Capital for peace**".

M.A. KHALID
State Secretary

# ಮುಖ್ಯ ಆಯುಕ್ತರ ನುಡಿ........



ಮಾನ್ಯರೆ,

ಹಿಂದಿನ ತಿಂಗಳ ಕೊನೆಯಲ್ಲಿ ನಾನು ಹಾಸನ, ಚಿಕ್ಕಮಗಳೂರು ಕೊಡಗು ಮತ್ತು ಮೈಸೂರು ಜಿಲ್ಲೆಗಳಿಗೆ ಭೇಟಿನೀಡಿ ಚಳವಳಿಯ ಬೆಳವಣಿಗೆ ಬಗ್ಗೆ ಪದಾಧಿಕಾರಿಗಳೊಂದಿಗೆ ಚರ್ಚಿಸಿದ್ದೇನೆ. ದಿನಾಂಕ 29 ಅಕ್ಟೋಬರ್, ಹಾಸನ ಜಿಲ್ಲಾ ಸಂಸ್ಥೆ, ಬಿಡಾರದಹಳ್ಳಿಯಲ್ಲಿ ಏರ್ಪಡಿಸಿದ್ದ ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದೆ. 50 ಶಿಕ್ಷಕ-ಶಿಕ್ಷಕಿಯರು ಶಿಬಿರದಲ್ಲಿದ್ದರು. ನನ್ನೊಂದಿಗೆ ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್ ಇದ್ದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಸಭೆಯಲ್ಲಿ ಭಾಗವಹಿಸಿದ್ದರು. 29ರಂದೇ ಚಿಕ್ಕಮಗಳೂರು ಜಿಲ್ಲೆಗೆ ಭೇಟಿ ನೀಡಿ ಪದಾಧಿಕಾರಿಗಳ ಸಭೆಯಲ್ಲಿ ಭಾಗವಹಿಸಿದೆ. ಜಿಲ್ಲೆಯಲ್ಲಿ ಆಗಬೇಕಾದ ಹಲವಾರು ಕಾರ್ಯಕ್ರಮಗಳು ಹಾಗೂ ತರಬೇತಿ ಶಿಬಿರ ನಡೆಸುವ ಬಗ್ಗೆ ವಿಚಾರ ವಿನಿಮಯ ಮಾಡಲಾಯಿತು.

ದಿನಾಂಕ 30 ಅಕ್ಟೋಬರ್ 2009ರಂದು ಕೊಡಗು ಜಿಲ್ಲಾ ಸಂಸ್ಥೆಯವರು ಜಿಲ್ಲಾ ಭವನದಲ್ಲಿ ಡಯಟ್ ವತಿಯಿಂದ ಏರ್ಪಡಿಸಿದ್ದ ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದ 103 ಅಭ್ಯರ್ಥಿಗಳಿಗೆ ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು. ಜಿಲ್ಲಾಧಿಕಾರಿಗಳಾದ ಶ್ರೀ ಕೆ. ಹೆಚ್. ಅಶ್ವತ್ಥ ನಾರಾಯಣಗೌಡ ಸಮಾರಂಭದಲ್ಲಿ ಭಾಗವಹಿಸಿ ಚಳವಳಿಯ ಬೆಳವಣಿಗೆಗೆ ಬೇಕಾದ ಎಲ್ಲಾ ಸಹಕಾರ ನೀಡುವುದಾಗಿ ಆಶ್ವಾಸನೆ ನೀಡಿ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

ದಿನಾಂಕ 30 ಅಕ್ಟೋಬರ್ 2009ರಂದು ಮೈಸೂರು ಜಿಲ್ಲಾ ಸಂಸ್ಥೆ ಮತ್ತು ರೋಟರಿ ಮೈಸೂರು ಉತ್ತರ, ಜೊತೆಗೂಡಿ, ಮೈಸೂರು ಜಿಲ್ಲಾ ಭವನದಲ್ಲಿ ಏರ್ಪಡಿಸಿದ್ದ ವಿನೂತನ ಕಾರ್ಯಕ್ರಮವಾದ "ಸ್ಕೌಟ್ ಗೈಡ್‌ಗಳೊಂದಿಗೆ ರೋಟರಿ ಸದಸ್ಯರು ಒಂದು ಸಂಜೆ" ಸಂಯುಕ್ತವಾಗಿ ಏರ್ಪಡಿಸಿದ್ದು ನಾನು ಅದರಲ್ಲಿ ಭಾಗವಹಿಸಿದ್ದೆ. ಈ ಚಳವಳಿಯ ಬಗ್ಗೆ ವಿವರಗಳನ್ನು ರೋಟರಿ ಸದಸ್ಯರುಗಳಿಗೆ ತಿಳಿಸಿ ಅವರ ನೆರವು-ಸಹಕಾರವನ್ನು ಸ್ಕೌಟ್-ಗೈಡ್ ಬೆಳವಣಿಗೆಗೆ ಕೋರಿದ್ದೇನೆ. ರೋಟರಿ ಹಾಗೂ ಸ್ಕೌಟ್-ಗೈಡ್ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಹಾಗು ಸ್ಕೌಟ್ಸ್-ಗೈಡ್ಸ್‌ಗಳು, ದಳನಾಯಕರುಗಳು, ತರಬೇತಿ ನಾಯಕ-ನಾಯಕಿಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ-ಶಿಬಿರಾಗ್ನಿ ಶಿಬಿರ ಯಶಸ್ವಿಯಾಗಿ ಜರುಗಲು ಸಹಕರಿಸಿದರು. ಮೈಸೂರು ಜಿಲ್ಲಾ ಸಂಸ್ಥೆ ಹಾಗೂ ರೋಟರಿ ಉತ್ತರ ಪದಾಧಿಕಾರಿಗಳು ಉತ್ಸಾಹದಿಂದ ಭಾಗವಹಿಸಿ-ಸೇವೆ ಮತ್ತು ಶಿಸ್ತು ಸಂಸ್ಥೆಗಳ ಮುಖ್ಯ ಧ್ಯೇಯ ಎಂಬುದನ್ನು ಯುವ ಸಮುದಾಯಕ್ಕೆ ಮನದಟ್ಟು ಮಾಡುವಲ್ಲಿ ಸಮಾರಂಭ ಯಶಸ್ವಿಯಾಯಿತು.

ಈ ತಿಂಗಳಲ್ಲಿ ರಾಜ್ಯದ ಏಳು ಜಿಲ್ಲೆಗಳಾದ ತುಮಕೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾಂ, ಬೆಂಗಳೂರು ಗ್ರಾಮಾಂತರಗಳಿಗೆ ಭೇಟಿ ನೀಡಿ ಪದಾಧಿಕಾರಿಗಳೊಂದಿಗೆ 2009-10ರಲ್ಲಿ ಆಯೋಜಿಸಿದ ಕಾರ್ಯಕ್ರಮಗಳು ತರಬೇತಿ, ಮೇಳಗಳು-ಸೇವಾ ಶಿಬಿರಗಳ ಬಗ್ಗೆ ಚರ್ಚಿಸಿದ್ದೇನೆ. ಅಲ್ಲದೆ ಡಯಟ್ ನೆರವಿನೊಂದಿಗೆ ಜಿಲ್ಲೆಗಳಲ್ಲಿ ಏರ್ಪಡಿಸಿದ್ದ ಮೂಲ ತರಬೇತಿ ಶಿಬಿರಗಳ ವಿವರಗಳನ್ನು ಪಡೆದು ದಳನಾಯಕರುಗಳ ಅವಶ್ಯಕತೆಗಳು ಹಾಗು ಮಾರ್ಗದರ್ಶನ ಮಾಡುವ ಬಗ್ಗೆಯೂ ಸೂಚಿಸಿದ್ದೇನೆ. ಜಿಲ್ಲಾ ಪದಾಧಿಕಾರಿಗಳು ಸ್ಥಳೀಯ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಬಗ್ಗೆ ಮನವರಿಕೆ ಮಾಡಿದ್ದೇನೆ.

ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಜರುಗಿದ ಸ್ಕೌಟ್ಸ್-ಗೈಡ್ಸ್ ರಾಜ್ಯ ಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರ ದಿನಾಂಕ 11-11-2009 ರಿಂದ 15ನೇ ನವೆಂಬರ್ ವರೆಗೆ ಜರುಗಿತು. ದಿನಾಂಕ 12 ನವೆಂಬರ್ ರಂದು ದಾವಣಗೆರೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಗುತ್ತಿ ಜಂಬುನಾಥ್‌ರವರು ಶಿಬಿರವನ್ನು ಉದ್ಘಾಟಿಸಿ ತರಬೇತಿ ಶಿಬಿರವನ್ನು ಅಭಿವೃದ್ಧಿ ಪಡಿಸುವಲ್ಲಿ ಜಿಲ್ಲಾ ಪಂಚಾಯತ್ ಎಲ್ಲ ನೆರವು ನೀಡುವುದೆಂದು ತಿಳಿಸಿದರು. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಶ್ರೀ ಪೋಲಯ್ಯ, ಗ್ರಾಮ ಪಂಚಾಯ್ತಿ ಅಧ್ಯಕ್ಷರಾದ ಶ್ರೀ ಹನುಮಂತಪ್ಪ, ಜಿಲ್ಲಾ ಪಂಚಾಯತ್ ಸದಸ್ಯೆ ಶ್ರೀಮತಿ ಸರೋಜಮ್ಮ ಮಹಂತೇಶ್, ಶ್ರೀ ಮುದೇಗೌಡಪ್ಪ ಹಾಗೂ ದಾವಣಗೆರೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಷಡಾಕ್ಷರಪ್ಪ, ಹಾಗೂ ಇತರ ಪದಾಧಿಕಾರಿಗಳು ಭಾಗವಹಿಸಿದ್ದರು.

ದಿನಾಂಕ 14 ನವೆಂಬರ್ 2009 ರಂದು ಮುಕ್ತಾಯ ಸಮಾರಂಭ, ಮಕ್ಕಳ ದಿನಾಚರಣೆ, ಸರ್ವಧರ್ಮ ಪ್ರಾರ್ಥನೆ, ಕೊಂಡಜ್ಜಿ ಬಸಪ್ಪ, ಸ್ಮರಣೆ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ರಾಜ್ಯದ ಕೃಷಿ ಸಚಿವರು ಹಾಗೂ ಜಿಲ್ಲಾ

ಉಸ್ತುವಾರಿ ಸಚಿವರಾದ ಸನ್ಮಾನ್ಯ ಶ್ರೀ ಎಸ್.ಎ. ರವಿಂದ್ರನಾಥ್ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ – ಚಳವಳಿಯ ಬೆಳವಣಿಗೆ ಹಾಗೂ ತರಬೇತಿ ಶಿಬಿರದ ಅಭಿವೃದ್ಧಿಗೆ ಎಲ್ಲ ಸಹಾಯ-ಸಹಕಾರ ನೀಡುವುದಾಗಿ ತಿಳಿಸಿದರು. ಹರಿಹರದ ಶಾಸಕರಾದ ಸನ್ಮಾನ್ಯ ಶ್ರೀ ಬಿ.ಪಿ. ಹರೀಶ್, ಅಧ್ಯಕ್ಷತೆ ವಹಿಸಿ ಮಾತನಾಡಿ, ಕೊಂಡಜ್ಜಿ ಗ್ರಾಮ ಮತ್ತು ಶಿಬಿರದ ಅಭಿವೃದ್ಧಿಗೆ ತಾವು ಎಲ್ಲ ನೆರವು ನೀಡುವುದಾಗಿ ತಿಳಿಸಿದರು.

ದಿನಾಂಕ 18 ನವೆಂಬರ್ ನಂದು ಶಿವಮೊಗ್ಗ ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿ ಡಯಟ್ ನೆರವಿನೊಂದಿಗೆ ಆಯೋಜಿಸಿದ ಮೂಲ ತರಬೇತಿ ಶಿಬಿರದಲ್ಲಿ 50 ಅಭ್ಯರ್ಥಿಗಳನ್ನು ಭೇಟಿಮಾಡಿದೆ. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಸಭೆಯಲ್ಲಿ ಭಾಗವಹಿಸಿದ್ದರು, ನನ್ನೊಂದಿಗೆ ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು (ಪ್ರಕಟಣೆ) ಇದ್ದರು.

ದಿನಾಂಕ 19 ನವೆಂಬರ್ ನಂದು ಹೊನ್ನಾವರದ 5 ಶಾಲೆಗಳಿಗೆ ಭೇಟಿನೀಡಿ ಸ್ಕೌಟ್-ಗೈಡ್ ಚಟುವಟಿಕೆಗಳನ್ನು ವೀಕ್ಷಿಸಿ ಶಾಲೆಯ ಮುಖ್ಯಸ್ಥರನ್ನು ಭೇಟಿಮಾಡಿ ಶುಭಾಶಯ ಕೋರಿದೆ. ಅಂದು ಸಂಜೆ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳ ಸಭೆ ನಡೆಸಿ 2009-10ರಲ್ಲಿ ನಡೆಸುವ ಕಾರ್ಯಕ್ರಮ ಚಟುವಟಿಕೆಗಳ ಕುರಿತು ವಿವರವಾಗಿ ಚರ್ಚಿಸಲಾಯ್ತು.

ದಿನಾಂಕ 20ರಂದು ಭಟ್ಕಳದ ಇಸ್ಲಾಮಿಯಾ ಆಂಗ್ಲೋ ಉರ್ದು ಪ್ರೌಢಶಾಲೆ ಆವರಣದಲ್ಲಿ ಜರುಗಿದ ಜಿಲ್ಲಾ ಸ್ಕೌಟ್-ಗೈಡ್ ಮೇಳದಲ್ಲಿ ಭಾಗವಹಿಸಿ ಶುಭಾಶಯ ಕೋರಿದ್ದೇನೆ. ಸಭೆಯಲ್ಲಿ ಜಿಲ್ಲೆಯ ಶ್ರೀ ಬಿ.ಎಂ. ಭಟ್ ಹಾಗೂ ಶ್ರೀ ಸತ್ಯನಾರಾಯಣ ಹೆಗ್ಡೆ ಅವರುಗಳಿಗೆ ವೃಕ್ಷಮಣಿದಾರಕ ಪ್ರಶಸ್ತಿಗಳನ್ನು ಪ್ರದಾನಮಾಡಲಾಯಿತು. ಸ್ಥಳೀಯ ಶಾಸಕರಾದ ಮಾನ್ಯ ಶ್ರೀ ಜೆ.ಡಿ. ನಾಯ್ಕ ಅವರು ಅಧ್ಯಕ್ಷತೆ ವಹಿಸಿ ಮೇಳವನ್ನು ಉದ್ಘಾಟಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ದೇವದಾಸ ಮೊಗೇರ ಭಾಗವಹಿಸಿದರು. ನಾನು ಮತ್ತು ಶ್ರೀ ಚೆಲ್ಲಯ್ಯ ಸಭೆಯಲ್ಲಿ ಮಾತನಾಡಿ ಶುಭಕೋರಿದೆವು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಜರಿದ್ದರು.

ದಿನಾಂಕ 25 ನವೆಂಬರ್‌ನಂದು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ರಾಜ್ಯ ಗೈಡ್ ವಿಭಾಗದವರು ಏರ್ಪಡಿಸಿದ್ದ ಆರು ವಿವಿಧ ತರಬೇತಿಯಲ್ಲಿ ರಾಜ್ಯದ 19 ಜಿಲ್ಲೆಗಳಿಂದ ಬಂದಿದ್ದ 114 ಅಭ್ಯರ್ಥಿಗಳನ್ನು ಹಾಗೂ ಶಿಬಿರದಲ್ಲಿ ವಿವಿಧ ತರಬೇತಿಗಳ ನಾಯಕಿಯರಾಗಿ-ಸಹಾಯಕಿಯರಾಗಿ ಭಾಗವಹಿಸಿದ್ದವರನ್ನು ಭೇಟಿಮಾಡಿ ಅವರುಗಳಿಗೆ ರಾಜ್ಯ ಸಂಸ್ಥೆಯ ಶುಭಾಶಯಗಳನ್ನು ತಿಳಿಸಿ, ಸಕ್ರಿಯವಾಗಿ ದಳನಡೆಸುವುದರೊಂದಿಗೆ ಹೆಚ್ಚಿನ ತರಬೇತಿ ಪಡೆದು ಅತ್ಯುತ್ತಮ ದಳನಾಯಕಿಯರಾಗಬೇಕೆಂದು ಕೋರಿದ್ದೇನೆ.

ದಿನಾಂಕ 26 ನವಂಬರ್‌ನಂದು ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ಡಯಟ್ ನೆರವಿನಿಂದ ಏರ್ಪಡಿಸಿದ್ದ ಮೂಲ ತರಬೇತಿ ಶಿಬಿರಕ್ಕೆ ಭೇಟಿ ನೀಡಿ ತರಬೇತಿ ಪಡೆದ 50 ಅಭ್ಯರ್ಥಿಗಳೊಂದಿಗೆ ಶುಭಾಶಯ ವಿನಿಮಯದೊಂದಿಗೆ-ಚಳವಳಿ ಬೆಳೆಸಲು, ಶ್ರಮಿಸಲು ಕೋರಿದ್ದೇನೆ. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

ರಾಜ್ಯದ ಏಳು ಜಿಲ್ಲೆಗಳಾದ ಶಿವಮೊಗ್ಗ, ಬಳ್ಳಾರಿ, ಬೀದರ್, ಗುಲ್ಬರ್ಗಾ, ಬೆಂಗಳೂರು ಗ್ರಾಮಾಂತರ, ಮೈಸೂರು, ಚಾಮರಾಜನಗರಗಳಲ್ಲಿ ಡಯಟ್ ನೆರವಿನೊಂದಿಗೆ ಈ ತಿಂಗಳಲ್ಲಿ ತರಬೇತಿ ಶಿಬಿರಗಳು ಜರುಗಿದ್ದು – ಸಾಕಷ್ಟು ಸಂಖ್ಯೆಯಲ್ಲಿ ಅಭ್ಯರ್ಥಿಗಳು ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದ ಬಗ್ಗೆ ಸಂಸ್ಥೆಗೆ ವರದಿ ಬಂದಿದೆ.

ಹಲವಾರು ಜಿಲ್ಲಾ ಸಂಸ್ಥೆಗಳು ಡಯಟ್ ನೆರವಿನಿಂದ ತರಬೇತಿ ಶಿಬಿರವನ್ನು ಮುಂದಿನ ತಿಂಗಳು ಏರ್ಪಡಿಸಿರುವ ಬಗ್ಗೆ ರಾಜ್ಯ ಸಂಸ್ಥೆಗೆ ವಿವರ ಬಂದಿದೆ.

ಜನವರಿ 2010ರೊಳಗಾಗಿ – ನಾವುಗಳು ಯೋಜಿಸಿರುವ ಎಲ್ಲಾ ಕಾರ್ಯಕ್ರಮಗಳು ಮುಗಿಸ ಬೇಕಿರುವುದರಿಂದ ಜಿಲ್ಲೆಗಳಿಗೆ ರಾಜ್ಯ ಸಂಸ್ಥೆಯಿಂದ ಸೂಚಿಸಿರುವ ಜಿಲ್ಲಾ ಸಂಯೋಜಕರುಗಳು ಸಂಬಂಧಪಟ್ಟ ಜಿಲ್ಲೆಗಳಿಗೆ ಭೇಟಿನೀಡಿ-ರಾಜ್ಯ ಸಂಸ್ಥೆಗೆ ವಿವರವಾದ ಮಾಹಿತಿ ನೀಡಲು ಕೋರುತ್ತೇನೆ.

ಬಕ್ರೀದ್ ಕ್ರಿಸ್‌ಮಸ್ ಇತರೆ ಹಬ್ಬ ಹರಿದಿನಗಳು ಸರ್ವರಿಗೂ ಸುಖ, ಶಾಂತಿ-ನೆಮ್ಮದಿ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬಿ. ಷಣ್ಮುಖಪ್ಪ

# ಕೊಂಡಜ್ಜಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳ ರಾಜ್ಯಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರ

ದಿನಾಂಕ 11-11-2009 ರಿಂದ 15-11-2009ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ ಕೊಂಡಜ್ಜಿಯಲ್ಲಿ ಸ್ಕೌಟ್-ಗೈಡ್‌ಗಳಿಗೆ ರಾಜ್ಯಮಟ್ಟದ ರಾಜ್ಯಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರ ನಡೆಯಿತು. ಈ ತರಬೇತಿಯಲ್ಲಿ ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳಿಂದ 400 ಸ್ಕೌಟ್ಸ್ ಹಾಗೂ ಗೈಡ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ 12-11-2009 ರಂದು ಬೆಳಗ್ಗೆ 11.30ಕ್ಕೆ ಉದ್ಘಾಟನಾ ಸಮಾರಂಭ ನಡೆಯಿತು. ಶ್ರೀ ಗುತ್ತಿ ಜಂಬುನಾಥ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ದಾವಣಗೆರೆ ಇವರು ಉದ್ಘಾಟನೆ ಮಾಡಿ ಮಾತನಾಡುತ್ತಾ ಕರ್ನಾಟಕದಲ್ಲಿ ಸ್ಕೌಟ್-ಗೈಡ್ ಚಳವಳಿ ಸಾಕಷ್ಟು ಅಭಿವೃದ್ಧಿಯಾಗಬೇಕು ಎಂದು ಹೇಳಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಸಮಾರಂಭದಲ್ಲಿ ಮಾತನಾಡುತ್ತಾ ಸ್ಕೌಟ್-ಗೈಡ್ ಚಳವಳಿಗೆ ಹಾಗೂ ತರಬೇತಿ ಕೇಂದ್ರದ ಅಭಿವೃದ್ಧಿಗೆ ಜಿಲ್ಲಾ ಪಂಚಾಯತ್ ಸಾಕಷ್ಟು ಸಹಕಾರ ಕೊಡಲು ಕೋರಿದರು.

ಈ ಕಾರ್ಯಕ್ರಮದಲ್ಲಿ ಶ್ರೀ ಪೋಲಯ್ಯ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಶ್ರೀ ಹನುಮಂತಪ್ಪ ಅಧ್ಯಕ್ಷರು ಕೊಂಡಜ್ಜಿ ಗ್ರಾಮ ಪಂಚಾಯಿತಿ ಮತ್ತು ಶ್ರೀ ಮುದೇಗೌಡಪ್ಪ, ದಾವಣಗೆರೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಕೊಂಡಜ್ಜಿ ಗ್ರಾಮಸ್ಥರು ಹಾಗೂ ಇತರರು ಭಾಗವಹಿಸಿದ್ದರು.

ದಿನಾಂಕ 14-11-2009 ರಂದು ಬೆಳಗ್ಗೆ 8.30 ಗಂಟೆಗೆ ಸರ್ವಧರ್ಮ ಪ್ರಾರ್ಥನೆ, ಮಕ್ಕಳ ದಿನಾಚರಣೆ, ಕೊಂಡಜ್ಜಿ ಬಸಪ್ಪ ಸ್ಮರಣೆ ಹಾಗು ಸ್ಕೌಟ್ ಮತ್ತು ಗೈಡ್‌ಗಳ ರಾಜ್ಯಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರದ ಮುಕ್ತಾಯ ಸಮಾರಂಭ ನಡೆಯಿತು.

ಮುಕ್ತಾಯ ಸಮಾರಂಭದಲ್ಲಿ, ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಶ್ರೀ ಎಸ್.ಎ. ರವೀಂದ್ರನಾಥ್, ಮಾನ್ಯ ಕೃಷಿ ಸಚಿವರು, ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದ ಕೈಪಿಡಿಯನ್ನು ಬಿಡುಗಡೆ ಮಾಡಿ ಸ್ಕೌಟ್ ಚಳವಳಿ ಸಾಕಷ್ಟು ಅಭಿವೃದ್ಧಿಯಾಗಬೇಕು, ಇದಕ್ಕೆ ಸರ್ಕಾರದಿಂದ ಸಾಕಷ್ಟು ನೆರವು ನೀಡುವುದಾಗಿ ಹೇಳಿದರು. ಕಾರ್ಯಕ್ರಮದಲ್ಲಿ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ಶಿವನಂಜಯ್ಯ, ಕೆ.ಎ.ಎಸ್. ನಿರ್ದೇಶಕರು, ಯುವಜನಸೇವೆ ಮತ್ತು ಕ್ರೀಡಾ ಇಲಾಖೆ, ಕರ್ನಾಟಕ ಸರ್ಕಾರ ಇವರು ಮಾತನಾಡುತ್ತಾ ಸ್ಕೌಟ್-ಗೈಡ್ ಚಳವಳಿಯು ಮಕ್ಕಳಲ್ಲಿ ಶಿಸ್ತನ್ನು ಬೆಳೆಸುತ್ತದೆ ಎಂದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಸರೋಜಮ್ಮ ಮಹಂತೇಶ್ ಜಿಲ್ಲಾ ಪಂಚಾಯತ್ ಸದಸ್ಯರು ಭಾಗವಹಿಸಿದ್ದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಅತಿಥಿಗಳನ್ನು ಸ್ವಾಗತಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಬಿ.ಪಿ. ಹರೀಶ್, ಮಾನ್ಯ ಶಾಸಕರು, ಹರಿಹರ ಕ್ಷೇತ್ರ, ಇವರು ಮಾತನಾಡಿ ಸ್ಕೌಟ್-ಗೈಡ್ ಮಕ್ಕಳಿಗೆ ಒಂದು ಶಿಕ್ಷಣವಾಗಿದೆ. ಸಮಾಜ ಸೇವೆಯಲ್ಲಿ ತೊಡಗಿಸಿಕೊಳ್ಳು ಸಹಾಯ ಮಾಡುತ್ತದೆ ಎಂದು ಹೇಳಿದರು. ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್) ವಂದನಾರ್ಪಣೆ ಮಾಡಿದರು

ಈ ಶಿಬಿರದಲ್ಲಿ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀ ಕುಮಾರ್, ಗೈಡ್ ವಿಭಾಗಕ್ಕೆ ನಾಯಕಿಯಾಗಿ ಶ್ರೀಮತಿ ತಾರಾ ರವರು ಕಾರ್ಯನಿರ್ವಹಿಸಿದರು. ಶ್ರೀ ನಾರಾಯಣಶೆಟ್ಟಿ ಹಾಗೂ ಶ್ರೀಮತಿ ಜಾನಕಿ ವೇಣುಗೋಪಾಲ್ ರಾಜ್ಯ ಸಂಘಟನಾ ಆಯುಕ್ತರು ಇವರು ಶಿಬಿರದ ಮೇಲ್ವಿಚಾರಕರಾಗಿದ್ದರು.





# Flag Day Observed on 7th November 2009

7th November, 1950 is the day the Bharat Scouts & Guides came into existence after merging of various Scout organisation and the girl Guide Association which were working separately with a common spirit prior to independence. 7th November is being celebrated all over India as "Flag Day". The aim of celebrating it as a Flag Day is to spread the message of Scouting & Guiding in all Sections of the Society.

Sri Shivananjaiah, Director of Youth Services and Sports, Govt. of Karnataka released the FoundationDay Flag on 7th November 2009 at State Headquarters Bangalore. In his address he said more young children should join the Scout & Guide Movement. Sri R.L. Patil, Joint Director (Training) Smt. Saroja V. Naidu, Vice-President, Prof. M. Suryanarayanappa incharge State Commissioner (Scout) were present. Sri M.A Khalid, State Secretary welcomed the guests and the participants. Sri N. Srinivasan, Joint Stat Secretary proposed the vote of thanks.

## Contribution towards the Flood Relief Fund

1. Staff Members of National Training Centre and National Adventure Institute of Bharat Scouts & Guides, Pachmhari, Madhya Pradesh Rs. 1351/-
2. Govt. Higher Primary School, Kaduralli, Kadur-Tq, Chikkamagalur District Rs. 1111/-
3. Holy Rosary Convent School, Honavar, Uttara Kannada Dist. Rs. 1095/-
4. Govt. Higher Primary School, Yaralakatte, Jagalur Tq, Davanagere District, Rs. 800/-
5. Bhagat Sing Rover Crew, Anekal, Bangalore South Rs. 10,000/-

## The Following Districts were collected the Relief Fund and handed over to the concerned Deputy Commissioners

6. Smt. K.S. Kamala, Dist. Commissioner (Guides.) Tumkar Rs. 1,00,000
6. Davangere Dist. Association Rs. 31,000/-
7. Dakshina Kannada Dist. Association Rs. 54,000/-
8. Chitradurga Dist. Association Rs. 25,000/-
9. Bangalore South Dist. Association handed over the relief materials worth Rs. 45,000/- to the Flood affected victims at Koppal Dist.

# ಜಿಲ್ಲಾ ವಾರ್ತೆ

## ಚಿತ್ರದುರ್ಗ

ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಜಿಲ್ಲೆ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ಇವರ ಸಂಯುಕ್ತಾಶ್ರಯದಲ್ಲಿ ದಿನಾಂಕ : 06-10-2009 ರಿಂದ 08-10-2009 ರ ವರೆಗೆ ಎಸ್.ಜೆ.ಎಂ. ಬೃಹನ್ಮಠ, ಚಿತ್ರದುರ್ಗದಲ್ಲಿ ಜಿಲ್ಲಾ ಮಟ್ಟದ ಪಟಾಲಂ ನಾಯಕರ, ಪದಕ ತರಬೇತಿ, ಸಮುದಾಯ ಅಭಿವೃದ್ಧಿ ಹಾಗೂ ರಾಜ್ಯ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್ ಪೂರ್ವಭಾವಿ ತರಬೇತಿ ಮತ್ತು ಕಬ್ಸ್ / ಬುಲ್ ಬುಲ್ಸ್ ಅರಾಳ ತರಬೇತಿ ನಡೆಯಿತು. ಪ್ರಸ್ತುತ ಕಾರ್ಯಕ್ರಮವನ್ನು ಶ್ರೀಯುತ ಎಂ. ಮಲ್ಲಣ್ಣ, ಉಪನಿರ್ದೇಶಕರು (ಅಭಿವೃದ್ಧಿ) ಮತ್ತು ಪ್ರಾಚಾರ್ಯರು, ಡಯಟ್, ಚಿತ್ರದುರ್ಗ ಇವರು ಸಸಿಗೆ ನೀರನ್ನು ಹಾಕುವುದರ ಮೂಲಕ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎನ್. ರಮೇಶ್, ಶಿಕ್ಷಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ ಇವರು ಭಾಗವಹಿಸಿದ್ದರು. ಶ್ರೀ ಕೆ. ಶಂಕರಪ್ಪ, ಉಪನಿರ್ದೇಶಕರು (ಆಡಳಿತ) ಚಿತ್ರದುರ್ಗ ಇವರಿಗೆ ಜಿಲ್ಲಾ ಮುಖ್ಯ ಆಯುಕ್ತರ ಸನ್ನದನ್ನು ನೀಡಲಾಯಿತು.

ವೇದಿಕೆಯಲ್ಲಿ ಜಿಲ್ಲಾ ಆಯುಕ್ತರು (ಗೈಡ್ಸ್) ಹೇಮಂತನಿ ಪ್ರಕಾಶ್, ಎ.ಎಸ್.ಓ.ಸಿ. ಶ್ರೀ ನೂರುಲ್ಲಾ, ಜಿಲ್ಲಾ ಆಯುಕ್ತರಾದ ಶ್ರೀ ಪಿ.ಎಲ್. ಸುರೇಶ್‌ರಾಜ್, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಅನ್ವರ್ ಭಾಷಾ ವಾರದ, ಶಿಬಿರದ ನಾಯಕರಾದ ಶ್ರೀ ಕೆ.ಟಿ. ತಿಪ್ಪೇರುದ್ರಪ್ಪ, ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.ಪ್ರಸ್ತುತ ಶಿಬಿರದಲ್ಲಿ ನಾಯಕರ ತರಬೇತಿಗೆ 110, ಪದಕ ತರಬೇತಿಗೆ 84, ಕಬ್/ಬುಲ್ ಬುಲ್ಸ್ ಆರಾಳ ತರಬೇತಿಗೆ 62, ರಾಜ್ಯ ಪುರಸ್ಕಾರ್ ಪೂರ್ವ ಸಿದ್ಧತಾ ಶಿಬಿರಕ್ಕೆ 35, ಒಟ್ಟು - 301 ಶಿಬಿರಾರ್ಥಿಗಳು 45ಕ್ಕೂ ಹೆಚ್ಚು ಸ್ಕೌಟರ್ಸ್, ಗೈಡರ್ಸ್‌ಗಳು ಭಾಗವಹಿಸಿದ್ದರು. ದಿನಾಂಕ 07-10-2009 ರ ರಾತ್ರಿ : 8.30 ಗಂಟೆಗೆ ಶಿಬಿರದಲ್ಲಿ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಬಸವಮೂರ್ತಿ ಮಾದಾರ ಚನ್ನಯ್ಯ ಸ್ವಾಮಿಗಳು ಉದ್ಘಾಟಿಸಿದರು.

ದಿನಾಂಕ 08-11-2009 ಬೆಳಗ್ಗೆ : 8:00 ಗಂಟೆಗೆ ನಡೆದ ಸರ್ವ ಧರ್ಮ ಪ್ರಾರ್ಥನೆಯಲ್ಲಿ ಶ್ರೀ ಸರ್ದಾರ್ ಸೇವಲಾಲ್ ಸ್ವಾಮೀಜಿ, ಬಂಜಾರ ಗುರುಪೀಠ, ಚಿತ್ರದುರ್ಗ ಇವರು ಸಾನ್ನಿಧ್ಯವಹಿಸಿ, ಮಕ್ಕಳಿಗೆ ಮೌಲ್ಯಯುತವಾದ ಸಂದೇಶಗಳನ್ನು ನೀಡಿದರು. ದಿನಾಂಕ 08-11-2009 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ಶ್ರೀಮತಿ ಹೇಮಂತನಿ ಪ್ರಕಾಶ್, ಜಿಲ್ಲಾ ಆಯುಕ್ತರು (ಗೈಡ್ಸ್) ಅಧ್ಯಕ್ಷತೆ ವಹಿಸಿದ್ದರು. ಶಿಬಿರದ ನಾಯಕರಾದ ಶ್ರೀ ಕೆ.ಟಿ. ತಿಪ್ಪೇರುದ್ರಪ್ಪ ಶಿಬಿರದ ವರದಿಯನ್ನು ಮಂಡಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಡಿ. ಹನುಮಂತರಾಯ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಚಿತ್ರದುರ್ಗ, ಶ್ರೀ ಪಿ.ಎಲ್. ಸುರೇಶ್‌ರಾಜ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಜಿ.ಎನ್. ಶಕುಂತಲ, ಶ್ರೀ ಗಂಗಣ್ಣ, ಶ್ರೀ ತಿಪ್ಪೇಸ್ವಾಮಿ, ಉಪನ್ಯಾಸಕರು, ಡಯಟ್ ಚಿತ್ರದುರ್ಗ ಶ್ರೀ ರಹಮತುಲ್ಲಾ ರವರು ವೇದಿಕೆಯಲ್ಲಿದ್ದರು.

### ಸಂತ್ರಸ್ತರಿಗೆ ನಿಧಿ

ಉತ್ತರ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಅತಿವೃಷ್ಟಿ ಹಾಗೂ ಪ್ರವಾಹದಿಂದ ಅತೀವ ಸಂಕಷ್ಟಕ್ಕೊಳಗಾಗಿರುವ ಲಕ್ಷಾಂತರ ಸಂತ್ರಸ್ತರುಗಳಿಗೆ ಜಿಲ್ಲಾ ಸಂಸ್ಥೆಯಿಂದ ರೂ. 25,000/- (ಇಪ್ಪತ್ತೈದು ಸಾವಿರ)ಗಳ ಕಿರು ಕಾಣಿಕೆಯನ್ನು ಅಪರ ಜಿಲ್ಲಾಧಿಕಾರಿಗಳಾದ ಶ್ರೀಮತಿ ನಾದಿಯ ಸುಲ್ತಾನ್ ಇವರಿಗೆ ದಿನಾಂಕ: 28-10-2009 ರಂದು ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಕೆ. ಶಂಕರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಜಿಲ್ಲೆ, ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಆಯುಕ್ತರು (ಗೈಡ್ಸ್) ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್ ಗೈಡ್ಸ್‌ಗಳು ಹಾಜರಿದ್ದರು.

## ಹಾಸನ

**ಜಿಲ್ಲಾ ಮಟ್ಟದ ಕಬ್ಸ್ ಮತ್ತು ಬುಲ್ ಬುಲ್ಸ್ ಸಿಕ್ಸರ್ಸ್ ತರಬೇತಿ**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದ ಆವರಣದಲ್ಲಿ ದಿನಾಂಕ: 6-10-2009 ರಿಂದ 08-10-2009 ರ ವರೆಗೆ ಜಿಲ್ಲಾ ಮಟ್ಟದ ಸಿಕ್ಸರ್ಸ್ ತರಬೇತಿಯನ್ನು ಕಬ್ಸ್ ಮತ್ತು ಬುಲ್ ಬುಲ್ಸ್ ಗಳಿಗಾಗಿ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಜಿಲ್ಲಾದ್ಯಂತ 76 ಕಬ್ಸ್‌ಗಳು ಹಾಗೂ 70 ಬುಲ್ ಬುಲ್ಸ್‌ಗಳು ತರಬೇತಿ ಪಡೆದಿದ್ದು ಕಬ್ಸ್ ವಿಭಾಗಕ್ಕೆ ಶ್ರೀಮತಿ ಮೇರಿ ಜೋಸ್ಟಿನ್ ಹೆಚ್.ಡಬ್ಲ್ಯೂ.ಬಿ. (ಸಿ) ಇವರು ನಾಯಕಿಯಾಗಿದ್ದರು ಹಾಗೂ ಬುಲ್ ಬುಲ್ ವಿಭಾಗಕೆ ಶ್ರೀಮತಿ ಸೋಫಿಯಾ ಫರ್ನಾಂಡೀಸ್ ಹೆಚ್.ಡಬ್ಲ್ಯೂ.ಬಿ. (ಬಿ) ಇವರು ನಾಯಕಿಯಾಗಿದ್ದರು. ಶಿಬಿರದ ಉದ್ಘಾಟನೆಯನ್ನು ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್) ಇವರು ನೆರವೇರಿಸಿದರು. ಶ್ರೀ ಎಂ. ಎನ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ, ಉಪಸ್ಥಿತರಿದ್ದರು. ಶಿಬಿರದಲ್ಲಿ ಗಂಟುಗಳ ಕಲಿಕೆ,

ಪ್ರಥಮ ಚಿಕಿತ್ಸೆ, ಕಬ್ಸ್ –ಬುಲ್ಸ್ ಗ್ರೀಟಿಂಗ್ ವನವಿದ್ಯಾ ಸಂಕೇತಗಳು, ಕಂಪಾಸಿನ ಬಗ್ಗೆ ಮಾಹಿತಿ, ಪ್ರಕೃತಿ ಅಧ್ಯಯನ, ಮೌಗ್ಲಿ ಕಥೆ ತಾರಾ ಕಥೆ, ಪ್ಯಾಕ್ ಮೀಟಿಂಗ್ ನಡೆಸುವ ಬಗ್ಗೆ ಮಾಹಿತಿ, ಬಾಲು ಪ್ಲೇ, ಬಗೀರ ಪ್ಲೇ, ರೆಡ್ ಪ್ಲವರ್, ಕಲರವ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು.

ಶ್ರೀಮತಿ ಸೋಫಿಯಾ ಫರ್ನಾಂಡೀಸ್ ಹೆಚ್.ಡಬ್ಲ್ಯೂ.ಬಿ. (ಬಿ) ಇವರು ನಾಯಕಿಯಾಗಿದ್ದರು. ಶಿಬಿರದ ಉದ್ಘಾಟನೆಯನ್ನು ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್) ಇವರು ನೆರವೇರಿಸಿದರು. ಶ್ರೀ ಎಂ. ಎನ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ, ಉಪಸ್ಥಿತರಿದ್ದರು. ಶಿಬಿರದಲ್ಲಿ ಗಂಟುಗಳ ಕಲಿಕೆ, ಪ್ರಥಮ ಚಿಕಿತ್ಸೆ, ಕಬ್ಸ್ – ಬುಲ್ಸ್ ಗ್ರೀಟಿಂಗ್ ವನವಿದ್ಯಾ ಸಂಕೇತಗಳು, ಕಂಪಾಸಿನ ಬಗ್ಗೆ ಮಾಹಿತಿ, ಪ್ರಕೃತಿ ಅಧ್ಯಯನ, ಮೌಗ್ಲಿ ಕಥೆ ತಾರಾ ಕಥೆ, ಪ್ಯಾಕ್ ಮೀಟಿಂಗ್ ನಡೆಸುವ ಬಗ್ಗೆ ಮಾಹಿತಿ, ಬಾಲು ಪ್ಲೇ, ಬಗೀರ ಪ್ಲೇ, ರೆಡ್ ಪ್ಲವರ್, ಕಲರವ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ದಿನಾಂಕ 8-10-2009 ರಂದು ಶಿಬಿರದ ಸಮಾರೋಪ ಸಮಾರಂಭವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಲಾಗಿತ್ತು. ಈ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಹಾಸನ ಅರವಿಂದ ವಿದ್ಯಾ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ತುಳಸಿ ವಿಠಲ್‌ರವರು ಆಗಮಿಸಿದ್ದರು. ಶ್ರೀಯುತ ಪ್ರಕಾಶ್ ಎನ್. ಯಾಜಿರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

**ಪ್ರಾಥಮಿಕ ತರಬೇತಿ**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ (ಡಯಟ್) ಯ ಸಂಯುಕ್ತ ಆಶ್ರಯದಲ್ಲಿ ಜಿಲ್ಲಾ ಮಟ್ಟದ ಶಿಕ್ಷಕ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ದಿನಾಂಕ 24-10-2009 ರಿಂದ 30-10-2009 ರ ವರೆಗೆ ಬೂದೇಶ್ವರ ಸ್ವಾಮಿ ಪುಣ್ಯಕ್ಷೇತ್ರ ಬಿಡಾರದಹಳ್ಳಿ ಹಾಸನ ತಾಲ್ಲೋಕ್ ಇಲ್ಲಿ ಏರ್ಪಡಿಸಲಾಗಿತ್ತು. ಈ ತರಬೇತಿ ಶಿಬಿರದಲ್ಲಿ 51 ಶಿಬಿರಾರ್ಥಿಗಳು ಹಾಜರಾಗಿದ್ದು, ಸ್ಕೌಟ್, ವಿಭಾಗಕ್ಕೆ ಶ್ರೀ ಆನಂದ ಅಡಿಗ ಎಲ್. ಟಿ. (ಸ್ಕೌಟ್) ಉಡುಪಿ, ಗೈಡ್ ಕ್ಯಾಪ್ಟನ್ ತರಬೇತಿಗೆ ಎನ್. ಕೆ. ಛಾಯಾ ಎಲ್.ಟಿ. (ಗೈಡ್) ಮತ್ತು ಕಬ್ ಮಾಸ್ಟರ್ ತರಬೇತಿಗೆ ಶ್ರೀ ಮತಿ ಜೂಲಿಯಾನಾ ಲಸ್ರಾಡೋ, ಎಲ್.ಟಿ.(ಕಬ್) ಇವರುಗಳು ನಾಯಕತ್ವ ವಹಿಸಿ, ತರಬೇತಿ ಶಿಬಿರವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.

ಶಿಬಿರದ ಉದ್ಘಾಟನೆಯನ್ನು ದಿನಾಂಕ: 25- 10-2009ರಂದು ಶ್ರೀಮತಿ ವಸಂತ ಶಂಕರ ನಾಯಕ್, ಅಧ್ಯಕ್ಷರು ತಾಲ್ಲೋಕ್ ಪಂಚಾಯ್ತಿ ಹಾಸನ ಇವರು ನೆರವೇರಿಸಿದರು. ಶ್ರಿಮತಿ ಗೌಸಿಯಾ ಬೇಗಂ ಪ್ರಾಚಾರ್ಯರು, ಡಯಟ್ ಮುಖ್ಯ ಅತಿಥಿಯಾಗಿ ಶಿಬಿರಕ್ಕೆ ಆಗಮಿಸಿದ್ದರು. ದಿನಾಂಕ: 29-10-2009 ರಂದು ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತರಾದ ಸನ್ಮಾನ್ಯ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪರವರು ಶಿಬಿರಕ್ಕೆ ಭೇಟಿ ನೀಡಿ, ಶಿಬಿರಾರ್ಥಿಗಳನ್ನು ಕುರಿತು ಮಾತನಾಡಿದರು. ರಾಜ್ಯ ಸಂಸ್ಥೆಯ ಜಂಟಿ ಕಾರ್ಯದರ್ಶಿಗಳು (ಸ್ಕೌಟ್) ಆದ ಶ್ರೀ ಎನ್. ಶ್ರೀನಿವಾಸನ್ ರವರು ಸಹಾ ಆಗಮಿಸಿ ಶಿಬಿರಾರ್ಥಿಗಳಿಗೆ ಸ್ಕೌಟಿಂಗ್ ಹಾಗೂ ಧರ್ಮ, ದೇವರಿಗೆ ಕರ್ತವ್ಯ ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಿದರು. ದಿನಾಂಕ 30-10-2009 ರಂದು ನಡೆದ ಶಿಬಿರದ ಸಮಾರೋಪ ಸಮಾರಂಭ ಮುಖ್ಯ ಅತಿಥಿಯಾಗಿ ಶ್ರೀಯುತ ಎನ್. ಕೆಂಚೇಗೌಡರು ಭಾಗವಹಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಡಾ: ವೈ. ಎಸ್. ವೀರಭದ್ರಪ್ಪರವರು ವಹಿಸಿದ್ದರು. ಈ ಸಂದರ್ಭದಲ್ಲಿ ಧರ್ಮದರ್ಶಿ, ಗುರುಸ್ವಾಮಿ, ಮಠದ ಕಾರ್ಯದರ್ಶಿಗಳಾದ ಶ್ರೀ ಎಲ್ ಪಿ. ಕುಮಾರ್ ರವರು ಸಹಾ ಉಪಸ್ಥಿತರಿದ್ದು ಶಿಬಿರಾರ್ಥಿಗಳಿಗೆ ಶುಭ ಸಂದೇಶ ನೀಡಿದರು.

## ಬಳ್ಳಾರಿ

**ಬಳ್ಳಾರಿ ತಾಲೂಕು ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ**

ದಿನಾಂಕ 10-11-2009 ರಂದು ಬಳ್ಳಾರಿ ತಾಲೂಕು ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವು, ಶ್ರೀ ಕೆಂಪರಂಗಯ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಆರ್ ವೆಂಕಣ್ಣ ಜಿಲ್ಲಾ ಮುಖ್ಯ ಆಯುಕ್ತರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಸಮಾವೇಶದಲ್ಲಿ ಮುಂದಿನ ಮೂರು ತಿಂಗಳಲ್ಲಿ ಹಮ್ಮಿಕೊಳ್ಳಬೇಕಾದ ಚಟುವಟಿಕೆಗಳ ಬಗ್ಗೆ ವಿವರವಾಗಿ ಚರ್ಚಿಸಲಾಯಿತು. ಮಾನ್ಯ ಶ್ರೀ ಕೆಂಪರಂಗಯ್ಯ ಕ್ಷೇತ್ರಶಿಕ್ಷಣಾಧಿಕಾರಿಗಳು ತಮ್ಮ ಭಾಷಣದಲ್ಲಿ, ಚಿಕ್ಕಂದಿನಿಂದಲೇ ಮಕ್ಕಳಲ್ಲಿ ಸೇವಾ ಪ್ರವೃತ್ತಿ ತ್ಯಾಗದ ಮನೋಭಾವನೆ ಬೆಳೆಸಿಕೊಳ್ಳಲು ತಿಳಿಸಿದರು.

ಪ್ರತಿಯೊಂದು ಸ್ಕೌಟ್ ಗೈಡ್ ಕಬ್ ಮತ್ತು ಬುಲ್ ಬುಲ್‌ಗಳಿಂದ ನೆರೆ ಸಂತ್ರಸ್ತರಿಗೆ ಹಣ ವಸೂಲು ಮಾಡಿ ತಾಲೂಕು ಸಂಸ್ಥೆಗೆ 14-11-2009 ರ ಬೆಳಗ್ಗೆ ತಲುಪಿಸಬೇಕೆಂದು ತಿಳಿಸಿದರು. ಈ ಸಮಾವೇಶದಲ್ಲಿ ತಾಲೂಕಿನ ಎಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಮಾನ್ಯ ಶ್ರಿ ವಿ.ಟಿ. ದಕ್ಷಿಣಾ ಮೂರ್ತಿ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಬಳ್ಳಾರಿ ಇವರು ಸ್ವಾಗತ ಮಾಡಿದರು. ಸಭೆಯಲ್ಲಿ 45 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

**ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳ ತರಬೇತಿ ಶಿಬಿರ**

ದಿನಾಂಕ 22-10-2009 ರಿಂದ 28-10-2009ರ ವರೆಗೆ ಹೆಚ್.ಪಿ.ಸಿ. ಕಮಲಾಪುರದಲ್ಲಿ ಸ್ಕೌಟ್-ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿಯಲ್ಲಿ 19 ಶಿಕ್ಷಕರು 15 ಶಿಕ್ಷಕಿಯರು ಭಾಗವಹಿಸಿದ್ದರು.ಈ ತರಬೇತಿ ಶಿಬಿರಗಳಿಗೆ ನಾಯಕರಾಗಿ ಶ್ರೀ ಹರ್ಷಕುಮಾರ್, ಎ.ಎಲ್.ಟಿ. (ಸ್ಕೌಟ್) ಮತ್ತು ಶ್ರೀಮತಿ ಅರುಣ ಕುಮಾರಿ ಭದ್ರಾವತಿ ವಹಿಸಿದ್ದರು. ತರಬೇತಿಯ ಉದ್ಘಾಟನೆಯನ್ನು ಶ್ರೀ ಆರ್. ವೆಂಕಣ್ಣ ಜಿಲ್ಲಾ ಮುಖ್ಯ ಆಯುಕ್ತರು ನೆರವೇರಿಸಿದರು. ಸಮಾರೋಪ ಸಮಾರಂಭಕ್ಕೆ ಮಾನ್ಯ ಶ್ರೀ ರಾಮಸುಬ್ಬಾರೆಡ್ಡಿ, ಡಿವಿಜಿನಲ್ ಇಂಜಿನಿಯರ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

## ರಾಯಚೂರು

**ಧ್ವಜ ದಿನಾಚರಣೆ ಕಾರ್ಯಕ್ರಮ**

ದಿನಾಂಕ : 7-11-2009 ರಂದು "ಬೇಡನ್ ಪಾವೆಲ್ ಸ್ಕೌಟ್ ಭವನ"ದಲ್ಲಿ ಧ್ವಜ ದಿನಾಚರಣೆ ಕಾರ್ಯಕ್ರಮವನ್ನು ಆಯೋಜಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯನವರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀದಶರಥರಾವ್ ಪ್ರಭಾರಿ ಮುಖ್ಯ ಗುರುಗಳು ಕೆ.ಇ.ಬಿ. ಪ್ರೌಢಶಾಲೆ ಆಗಮಿಸಿದ್ದರು. ಸ್ಥಳೀಯ ಆಯುಕ್ತರಾದ ಅಲಿಯಾ ಖಾನಂ ಉಪಸ್ಥಿತರಿದ್ದರು. ವಿವಿಧ ಶಾಲೆಯ ಸ್ಕೌಟ್ಸ್, ಗೈಡ್ಸ್‌ಗಳು ಹಾಗೂ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ಸ್ ಭಾಗವಹಿಸಿದ್ದರು.

ಶ್ರೀಮತಿ ಅಜೀಜಾ ಸುಲ್ತಾನಾ, ಜಿಲ್ಲಾ ಆಯುಕ್ತೆ (ಗೈಡ್) ಕಾರ್ಯಕ್ರಮವನ್ನು ಕುರಿತು ಪ್ರಾಸ್ತಾವಿಕವಾಗಿ ಮಾತನಾಡಿದರು. ನಂತರ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಮುಖ್ಯ ಅತಿಥಿಗಳು ಧ್ವಜ ಬಿಡುಗಡೆ ಕಾರ್ಯಕ್ರಮವನ್ನು ನೆರವೇರಿಸಿಕೊಟ್ಟರು. ಶ್ರೀ ರಾವುತ್‌ರಾವ್ ಡಿ.ಓ.ಸಿ. (ಸ್ಕೌ) ಸರ್ವರನ್ನು ಸ್ವಾಗತಿಸಿ ಕಾರ್ಯಕ್ರಮ ನಿರೂಪಣೆ ಮಾಡಿದರು ಶ್ರೀಮತಿ ಭುವನೇಶ್ವರಿ, ಡಿ.ಓ.ಸಿ. (ಗೈ) ವಂದನಾರ್ಪಣೆ ಮಾಡಿದರು.

## ಉತ್ತರ ಕನ್ನಡ

**ಪ್ರಗತಿ ಸ್ಕೌಟ್ಸ್ ಮತ್ತು ಪ್ರಗತಿ ಗೈಡ್ಸ್ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ವಿತರಣಾ ಸಮಾರಂಭ**

ವಿದ್ಯಾರ್ಥಿಗಳಲ್ಲಿ ಸೇವಾ ಮನೋಭಾವ ಬೆಳೆಸಿ ಉತ್ತಮ ನಾಗರಿಕರಾಗಲು ಹಾಗೂ ಸರ್ವತೋಮುಖ ಅಭಿವೃದ್ಧಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಅತ್ಯುತ್ತಮ ಎಂದು ತಾಲೂಕ ಪಂಚಾಯತ ಉಪಾಧ್ಯಕ್ಷರಾದ ಶ್ರೀಮತಿ ಶಾರದಾ ಪಿ. ವಾಲ್ಮೀಕಿ ಅವರು ಸರಕಾರಿ ಪ್ರೌಢಶಾಲೆ ಲಂಬಾಪುರದ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ವಿತರಿಸಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಗ್ರಾಮ ಪಂಚಾಯತಿ ಅಧ್ಯಕ್ಷರಾದ ಡಿ.ಜಿ. ಹೆಗಡೆ ಗೊದ್ಲಮನೆ, ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ಎಂ. ಗಣಪತಿಯಪ್ಪ ರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಎಸ್.ಡಿ.ಎಂ.ಸಿ. ಉಪಾಧ್ಯಕ್ಷರಾದ ಜಿ. ಆರ್. ನಾಯಕ್ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ತಾಲೂಕು ಮಾರ್ಕೆಟಿಂಗ್ ಸೊಸೈಟಿಯ ಉಪಾಧ್ಯಕ್ಷರು, ಗ್ರಾಮ ಪಂಚಾಯತ ಸದಸ್ಯರು, ಎಸ್.ಡಿ.ಎಂ.ಸಿ. ಸದಸ್ಯರು ಈ ಸಮಾರಂಭಕ್ಕೆ ಆಗಮಿಸಿದ್ದರು. 37 ವಿದ್ಯಾರ್ಥಿಗಳಿಗೆ ಸಮವಸ್ತ್ರವನ್ನು ವಿತರಿಸಲಾಯಿತು. ಕಾರ್ಯಕ್ರಮದಲ್ಲಿ ಶಿಕ್ಷಕ ವೃಂದ, ವಿದ್ಯಾರ್ಥಿಗಳು ಊರ ನಾಗರೀಕರು ಉಪಸ್ಥಿತರಿದ್ದರು. ಸಿದ್ಧಾಪುರ ತಾಲೂಕು ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯದರ್ಶಿ ಹಾಗೂ ಪ್ರೌಢಶಾಲೆಯ ಸ್ಕೌಟ್ಸ್ ಅಧ್ಯಾಪಕರಾದ ಪಿ.ಎಂ. ಶಿರಾಲಿ ಸ್ವಾಗತಿಸಿದರು. ರಚನಾ ಹೆಗಡೆ ವಂದನಾರ್ಪಣೆ ಮಾಡಿದರು. ಪೂಜಾ ಹೆಗಡೆ ಕಾರ್ಯಕ್ರಮ ನಿರೂಪಿಸಿದರು.

**ಸ್ಕೌಟ್ಸ್ - ಗೈಡ್ಸ್ ಮೇಳ, ಭಟ್ಕಳ**

ದಿನಾಂಕ 20-11-2009 ಶುಕ್ರವಾರದಂದು ಭಟ್ಕಳದ ಇಸ್ಲಾಮಿಯಾ ಆಂಗ್ಲೋ ಉರ್ದು ಪ್ರೌಢಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಆಯೋಜಿಸಲಾಗಿತ್ತು. ಮೇಳವನ್ನು ಸ್ಥಳೀಯ ಶಾಸಕರಾದ ಶ್ರೀ ಜೆ.ಡಿ. ನಾಯ್ಕರವರು ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಜಿ.ಜಿ. ಸಭಾಹಿತರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮತ್ತು ರಾಜ್ಯ ಕಛೇರಿಯ ಸ್ಥಾನಿಕ ಆಯುಕ್ತರು ಮತ್ತು ಉತ್ತರ ಕನ್ನಡ ಜಿಲ್ಲಾ ಉಸ್ತುವಾರಿ ವಹಿಸಿರುವ (ಕೋ ಆರ್ಡಿನೇಟರ್) ಶ್ರೀ ಎಂ.ಎ. ಚೆಲ್ಲಯ್ಯನವರು ಆಗಮಿಸಿದ್ದರು. ಸಭೆಯಲ್ಲಿ ಭಟ್ಕಳದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ದೇವಿದಾಸ ಮೊಗೇರ, ಜಿಲ್ಲೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ರ್‍ಯಾಲಿಯಲ್ಲಿ ಜಿಲ್ಲೆಯಿಂದ 270 ಸ್ಕೌಟ್ಸ್ ಗೈಡ್ಸ್‌ಗಳು ಮತ್ತು 50 ಸ್ಕೌಟರ್, ಗೈಡರ್, ಕಬ್ ಮಾಸ್ಟರ್ ಮತ್ತು ಫ್ಲಾಕ್ ಲೀಡರ್‌ಗಳು ಭಾಗವಹಿಸಿದ್ದರು.

**ಹೊನ್ನಾವರ :**

7-11-2009 ರಂದು ಮಾರ್ಥೋಮಾ ಶಾಲೆಯ ಸ್ಕೌಟ್ಸ್, ಗೈಡ್ಸ್ ಕಬ್ಸ್, ಬುಲ್ ಬುಲ್ಸ್‌ಗಳು ಸ್ಕೌಟ್ಸ್-ಗೈಡ್ಸ್ ಸಪ್ತಾಹದಲ್ಲಿ ಭಾಗಿಯಾದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ವಿ.ವಿ. ನಾಯ್ಕ, ಡಿ.ಓ.ಸಿ. ಶ್ರೀ ಎಸ್. ಎಂ. ಲೋಪಿಸ್, ತಾಲ್ಲೂಕಾ ಕಾರ್ಯದರ್ಶಿ, ಆರ್. ಎನ್. ನಾಯ್ಕ ಉಪಸ್ಥಿತರಿದ್ದು ಸ್ಕೌಟ್ಸ್ ಗೈಡ್ಸ ಸಪ್ತಾಹದ ಬಗ್ಗೆ ವಿವರವಾಗಿ ಮಾತನಾಡಿದರು. ಅಧ್ಯಕ್ಷತೆಯನ್ನು ಶಾಲೆಯ ಪ್ರಾಂಶುಪಾಲರಾದ ಫಾ॥ ಥೋಮಸ್ ಮೆಥ್ಯು ವಹಿಸಿದ್ದು, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಡಿ. ಫರ್ನಾಂಡೀಸ್ ಎಲ್ಲರನ್ನು ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ನರೇಶ ನಾಯ್ಕ ವಂದಿಸಿದರು. ಈ ಸಂದರ್ಭದಲ್ಲಿ ಫಾ॥ ಥೋಮಸ್ ಮೆಥ್ಯ್ಯು ರವರು ಸ್ಕೌಟ್ ಧ್ವಜ ಹಾಗೂ ಚೀಟಿಯನ್ನು ಬಿಡುಗಡೆ ಮಾಡಿದರು. ಮಾರ್ಥೋಮಾ ಸ್ಕೌಟ್ಸ್-ಗೈಡ್ಸ್‌ಗಳು 1ನೇ ನವೆಂಬರ್ 2009ರಂದು ಕನ್ನಡ ರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿದರು. ದಿನಾಂಕ 25-10-2009 ರಂದು ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಜೋಗ್‌ಫಾಲ್ಸ್‌ಗೆ ಚಾರಣ ಶಿಬಿರ ಹಾಗೂ ನಿಸರ್ಗ ಅಧ್ಯಯನ ಶಿಬಿರವನ್ನು ಏರ್ಪಡಿಸಲಾಗಿತ್ತು.

## ಬಾಗಲಕೋಟೆ

**ಧ್ವಜ ಚೀಟಿ ಬಿಡುಗಡೆ ಸಮಾರಂಭ**

ದಿನಾಂಕ 7 ನವೆಂಬರ್ 2009 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬಾಗಲಕೋಟೆ ಯಲ್ಲಿ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಸಮಾರಂಭದ ಅಧ್ಯಕ್ಷತೆಯನ್ನು ಮಾನ್ಯಶ್ರೀ ಎಸ್.ಆರ್. ಮನಹಳ್ಳಿ, ಉಪನಿರ್ದೇಶಕರು, ಹಾಗೂ ಮುಖ್ಯ ಆಯುಕ್ತರು, ಬಾಗಲಕೋಟೆ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರು ವಹಿಸಿ ಧ್ವಜ ಚೀಟಿಯನ್ನು ಬಿಡುಗಡೆ ಮಾಡಿದರು. ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಸರಕಾರಿ ಹೆಣ್ಣು ಮಕ್ಕಳ ಶಾಲೆಯ ಉಪಪ್ರಾಚಾರ್ಯರಾದ ಶ್ರೀ ಮುಗಳಖೋಡ ಭಾಗವಹಿಸಿದ್ದರು. ಜಿಲ್ಲಾ ಆಯುಕ್ತರಾದ ಶ್ರೀ ಜಿ.ಬಿ. ಇದ್ದಲಗಿ, ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ, ಡಿ.ಓ.ಸಿ.ಗಳಾದ ಶ್ರೀ ಎಂ.ಎಂ. ಹಳ್ಳೂರ, ಎ.ಎಸ್.ಓ.ಸಿ. ಶಿವಕುಮಾರ, ಶ್ರೀಮತಿ ಎಸ್.ಎಸ್. ಕಲಾದಗಿ ಹಾಗೂ ಬಸವೇಶ್ವರ ಪ್ರಾಥಮಿಕಶಾಲೆ ವಿದ್ಯಾಗಿರಿ, ಎಲ್.ಪಿ.ಎಸ್.ನಂ 16, ನವನಗರದ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಕೊನೆಯದಾಗಿ ಗೈಡ್ ಕ್ಯಾಪ್ಟನ್ ರಾದ ಶ್ರೀಮತಿ ಪಿ.ಜಿ. ಬಂದಿಕೇರಿ ವಂದಿಸಿದರು.

**ಸ್ಕೌಟ್ಸ್ - ಗೈಡ್ಸ್ ಮೇಳ,**

ದಿನಾಂಕ 14-11-2009 ರಂದು ಬಾಗಲಕೋಟೆ ಜಿಲ್ಲಾ ಸ್ಕೌಟ್ ಮತ್ತು ಗೈಡ್ ಸಂಸ್ಥೆ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಂಯುಕ್ತ ಆಶ್ರಯದಲ್ಲಿ ಜಿಲ್ಲಾ ಮಟ್ಟದ ಮಕ್ಕಳ ಮೇಳ ಹಾಗೂ ಮಕ್ಕಳ ದಿನಾಚರಣೆಯನ್ನು ಅದ್ದೂರಿಯಾಗಿ ಶ್ರೀ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದ ಆವರಣದ ಮೈದಾನದಲ್ಲಿ ನಡೆಸಲಾಯಿತು. ಪ್ರಾರಂಭದಲ್ಲಿ ವಿಶ್ವಶಾಂತಿಗಾಗಿ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು.

ಮಕ್ಕಳ ಮೇಳದ ಅಧ್ಯಕ್ಷತೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಎಸ್.ಆರ್. ಪಾಟೀಲ, ಶಾಸಕರು ವಹಿಸಿದ್ದರು. ಉದ್ಘಾಟಕರಾಗಿ ಮಾನ್ಯಶ್ರೀ ವೀರಣ್ಣ ಚರಂತಿಮಠ, ಶಾಸಕರು, ಬಾಗಲಕೋಟೆ ಇವರು ಭಾಗವಹಿಸಿದ್ದರು. ಭಾವಚಿತ್ರ ಅನಾವರಣವನ್ನು ಮಾನ್ಯಶ್ರೀ ಪಿ.ಸಿ. ಗದ್ದಿಗೌಡರ, ಲೋಕಸಭಾ ಸದಸ್ಯರು ನೆರವೇರಿಸಿದರು. ಅತಿಥಿಗಳಾಗಿ ಜಿಲ್ಲಾ ಪಂಚಾಯತಿಯ ಅಧ್ಯಕ್ಷರಾದ ಶ್ರೀಮತಿ ಕಸ್ತೂರಿಬಾಯಿ ಕಾತ್ರಾಳ ಹಾಗೂ ಉಪಾಧ್ಯಕ್ಷರಾದ ಶ್ರೀ ಹಣಮಂತ ಮಾವಿನಮರದ ಭಾಗವಹಿಸಿದ್ದರು.

ಜಿಲ್ಲಾ ಸಂಸ್ಥೆಯ ಹಿರಿಯ ಉಪಾಧ್ಯಕ್ಷರಾದ ಮಾನ್ಯಶ್ರೀ ಜಿ.ಎನ್. ಪಾಟೀಲ ಸ್ವಾಗತ ಕೋರಿದರು. ಪ್ರಾಸ್ತಾವಿಕವಾಗಿ ಸಂಸ್ಥೆಯ ಮುಖ್ಯ ಆಯುಕ್ತರಾದ ಸನ್ಮಾನ್ಯಶ್ರೀ ಎಸ್.ಆರ್. ಮನಹಳ್ಳಿ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ. ಬಾಗಲಕೋಟರವರು ಮಾತನಾಡಿದರು. ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಚಂದ್ರಶೇಖರ್ ಸಾವಳಗಿ, ಹಾಗೂ ಎ.ಎಸ್.ಓ.ಸಿ (ಎಸ್) ಗಳಾದ ಶ್ರೀ ಶಿವಕುಮಾರರವರು ಧ್ವಜಾರೋಹಣ ಕಾರ್ಯಕ್ರಮ ನಡೆಸಿಕೊಟ್ಟರು. ಶ್ರೀ ಎಂ.ಎಂ. ಹಳ್ಳೂರ (ಎಸ್) ಕಾರ್ಯಕ್ರಮದ ನಿರೂಪಣೆ ಮಾಡಿದರು. ಜಿಲ್ಲೆಯ ಎಲ್ಲಾ ತಾಲೂಕುಗಳಿಂದ ಸುಮಾರು 3500 ಮಕ್ಕಳು. 500 ಸ್ಕೌಟ್ಸ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳು ಪಾಲ್ಗೊಂಡಿದ್ದರು. ನಂತರ ಶಹರದ ಪ್ರಮುಖ ಬೀದಿಗಳಲ್ಲಿ ಪಥಸಂಚಲನ ನಡೆಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬಾದಾಮಿ, ಬಾಗಲಕೋಟೆ ಜಿಲ್ಲೆಯಲ್ಲಿ. ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವು ಜರುಗಿತು. ಸಮಾವೇಶದ ಅಧ್ಯಕ್ಷತೆಯನ್ನು ದೈಹಿಕ ಪರಿವೀಕ್ಷಕರಾದ ಶ್ರೀ ವ್ಹಿ.ಎಸ್. ಮೇಟಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬಾದಾಮಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಪ್ರಾಚಾರ್ಯರಾದ ಶ್ರೀ ಅಚನೂರವರು ವಹಿಸಿದ್ದರು. ತಾಲ್ಲೂಕಿನಿಂದ 100 ಸ್ಕೌಟರ್ಸ್ ಮತ್ತು ಗೈಡರ್ಸ್ ಭಾಗವಹಿಸಿದ್ದರು. ಸ್ವಾಗತವನ್ನು ಶ್ರೀ ಬಿ.ಎಸ್. ಕೆರೂರರವರು ಮಾಡಿದರು. ಮತ್ತು ಕಾರ್ಯಕ್ರಮದ ನಿರೂಪಣೆಯನ್ನು ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಆರ್.ಎನ್. ಸಾರವಾಡರವರು ಮಾಡಿದರು. ಕೊನೆಗೆ ವಂದನಾರ್ಪಣೆಯನ್ನು ಸಹಕಾರ್ಯದರ್ಶಿಯವರಾದ ಶ್ರೀ ವಿ.ಎಸ್. ಶೆಟ್ಟರವರು ಮಾಡಿದರು.

## ಕೋಲಾರ

ಜಿಲ್ಲಾ ಸಂಸ್ಥೆ ಕೋಲಾರ, ಶಂರಕವಿದ್ಯಾಲಯ, ಕೋಲಾರ ಹಾಗೂ ರೋಟರಿ ಸಂಸ್ಥೆ, ಕೋಲಾರ ಇವರುಗಳ ಸಂಯುಕ್ತಾಶ್ರಯದಲ್ಲಿ ದಿನಾಂಕ 2-10-2009 ರಂದು ಬೆಳಗ್ಗೆ 9.00 ಗಂಟೆಗೆ ಶಂಕರವಿದ್ಯಾಲಯದ ಶಾಲಾ ಆವರಣದಲ್ಲಿ ಗಾಂಧೀ ಜಯಂತಿಯನ್ನು ಸರ್ವಧರ್ಮ ಪ್ರಾರ್ಥನೆಯೊಂದಿಗೆ ಪ್ರಾರಂಭಿಸಲಾಯಿತು. ನಂತರ ನಡೆದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಯುತ. ಕೆ.ವಿ. ಶಂಕರಪ್ಪ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿಕೊಂಡು, ಗಾಂಧೀಜಿಯವರ ಬಗ್ಗೆ ಮಕ್ಕಳಗೆ ತಿಳಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.

ನಂತರ ರೋಟರಿ ಸಂಸ್ಥೆ ಅಧ್ಯಕ್ಷರು, ಗಾಂಧೀಜಿಯವರ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರಿಯವರ ಬಗ್ಗೆ ಮಾತನಾಡಿದರು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಶ್ರಮದಾನವನ್ನು ಮಾಡಿಸಲಾಯಿತು. ಕಾರ್ಯಕ್ರಮಕ್ಕೆ ಆಗಮಿಸಿದ ಗಣ್ಯರನ್ನು ಶಾಲಾ ಪ್ರಾಂಶುಪಾಲರಾದ ಶ್ರೀಮತಿ ಉಮಾದೇವಿ ಸ್ವಾಗತಿಸಿದರು ಹಾಗೂ ಶ್ರೀ ಎಂ.ವಿ. ಜನಾರ್ಧನರವರು ಎಲ್ಲರನ್ನು ವಂದಿಸಿದರು.

## ಬಿಜಾಪುರ

ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಮುದ್ದೆಬಿಹಾಳ ಸಮೀಪವಿರುವ ಜಲಪುರ ಮತ್ತು ನಾಲತವಾಡ ಗ್ರಾಮಗಳಲ್ಲಿ ರಸ್ತೆ ಸ್ವಚ್ಛತೆ, ಚರಂಡಿ ಸ್ವಚ್ಛತೆ ಮುಂತಾದ ಸೇವೆಯನ್ನು ಮಾಡುವುದರ ಜೊತೆಗೆ ಮುದ್ದೇಬಿಹಾಳ ನಗರದಲ್ಲಿ ಸಂಚರಿಸಿ ನಿರಾಶ್ರಿತರಿಗಾಗಿ ರೂ. 12,000/- ನಿಧಿಯನ್ನು ಸಂಗ್ರಹಿಸಿ. ಮುಖ್ಯಮಂತ್ರಿ ಪರಿಹಾರ ನಿಧಿಗೆ ಸಮರ್ಪಿಸಲಾಯಿತು. 10 ಜನ ರೋವರ್‌ಗಳು, ವಿವೇಕಾನಂದ ಯುವಕ ಸಂಘ, ಬಸರಕೋಡ, ಸರ್.ಎಂ. ವಿಶ್ವೇಶ್ವರಯ್ಯ ತಾಂತ್ರಿಕ ಶಾಲೆ, ಮುದ್ದೇಬಿಹಾಳ ಇವರ ಸಹಯೋಗದೊಂದಿಗೆ, ಪ್ರೊ. ಎಸ್.ಎಸ್. ಹೂಗಾರ, ರೋವರ್ ಲೀಡರ್, ಶ್ರೀ ಜಗದೀಶ್ ಬೆಳಸೂರ ಸ್ಕೌಟ್ಟ್ ಮಾಸ್ಟರ್ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಅರವಿಂದ ಹುಕೊಪ್ಪ. ಇವರ ನೇತೃತ್ವದಲ್ಲಿ ಈ ಕಾರ್ಯಕ್ರಮ ನಡೆಸಲಾಯಿತು.

## ಕೊಡಗು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕೊಡಗು ಜಿಲ್ಲಾ ಸಂಸ್ಥೆಯ ವತಿಯಿಂದ 7-11-2009 ರಂದು ಧ್ವಜ ದಿನಾಚರಣೆಯನ್ನು ಜಿಲ್ಲಾಧಿಕಾರಿಗಳಾದ ಚಂದ್ರೇಗೌಡರು ಧ್ವಜ ಬಿಡುಗಡೆ ಮಾಡುವ ಮೂಲಕ ಅಚರಿಸಲಾಯಿತು. ಈ ಸರಳ ಸಮಾರಂಭದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಕೊಡಗು ಜಿಲ್ಲೆ ಪಂಚಾಯತ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕೊಡಗು ಉಪವಿಭಾಗಾಧಿಕಾರಿಗಳು ಕೊಡಗು ಮತ್ತು ಅಕ್ಷರ ದಾಸೋಹದ ಮುಖ್ಯಸ್ಥರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಕೆ.ಟಿ. ಮ್ಯಾಥ್ಯೂರವರು ಸಂಘಟನಾ ಆಯುಕ್ತರಾದ, ಶ್ರೀ ಜಿಮ್ಮಿಸಿಕ್ವೇರಾ, ಕಾರ್ಯದರ್ಶಿಯವರಾದ ದಮಯಂತಿಯವರು ಸ್ಕೌಟ್ಸ್ ವಿಭಾಗದ ತರಬೇತಿ ಆಯುಕ್ತರಾದ ಶ್ರೀ ಪಿ. ಅಯ್ಯಣ್ಣನವರು ಗೈಡ್ ವಿಭಾಗದ ತರಬೇತಿ ಆಯುಕ್ತರಾದ ಸಗಾಯಮೇರಿ ಹಾಗೂ ಸಂತಮೈಕ್ ಶಾಲೆಯ ಸ್ಕೌಟ್ ಮತ್ತು ಗೈಡ್ ಮಕ್ಕಳು, ಸಂತ ಜೊಸೆಫರ ಶಾಲೆ ಗೈಡ್ಸ್ ಗಳು ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಪ್ರಶಸ್ತಿ ಪತ್ರ ಪ್ರದಾನ ದಿನಾಂಕ 08-11-2009 ರಂದು ಜಿಲ್ಲಾಧಿಕಾರಿಗಳ ನಿವಾಸದಲ್ಲಿ ನಡೆಯಿತು. ಶ್ರೀ ಐ.ಎ. ಕೈರನ್ನ ಜಿಲ್ಲಾ ಮುಖ್ಯ ಆಯುಕ್ತರು ಸ್ವಾಗತಿಸಿದರು. 146 ಕಬ್ಸ್, 155 ಬುಲ್ ಬುಲ್ಸ್ 154 ಸ್ಕೌಟ್ಸ್ ಮತ್ತು 276 ಗೈಡ್ಸ್‌ಗಳಿಗೆ ಜಿಲ್ಲಾಧಿಕಾರಿಗಳು ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪೊನ್ನುರಾಜ್, ಐ.ಎ.ಎಸ್., ಪ್ರಶಸ್ತಿ ಪತ್ರ ವಿತರಣೆ ಮಾಡಿದರು. ಇದೇ ಸಂದರ್ಭದಲ್ಲಿ ಬರ ಪರಿಹಾರ ನಿಧಿಗಾಗಿ 54,000 ರೂಗಳನ್ನು ಚೆಕ್ ಮೂಲಕ ನೀಡಲಾಯಿತು. ಶ್ರೀ ರಾಮಶೇಷಶೆಟ್ಟಿ ಜಿಲ್ಲಾ ಆಯುಕ್ತರು ವಂದನಾರ್ಪಣೆಗೈದರು, ಶ್ರಿ ಪ್ರತಿಮ್ ಕುಮಾರ್, ಎಲ್.ಟಿ. (ಸ್ಕೌಟ್) ಕಾರ್ಯಕ್ರಮ ನಿರ್ವಹಣೆ ಮಾಡಿದರು.

1-11-2009 ಕನ್ನಡ ರಾಜ್ಯೋತ್ಸವ ದಿನದಂದು ನೆಹರು ಮೈದಾನದಲ್ಲಿ ನಡೆದ ಪಥಸಂಚಲನದಲ್ಲಿ ಸೈಂಟ್ ಜೆರೋಸ ಪ್ರೌಢ ಶಾಲೆಯ ಗೈಡ್‌ಗಳು ಸಂಸ್ಥೆಯನ್ನು ಪ್ರತಿನಿಧಿಸಿದರು, ಮಾತ್ರವಲ್ಲದೆ ಪ್ರಥಮ ಸ್ಥಾನ ಪಡೆದು ಜಿಲ್ಲಾಡಳಿತದ ರಾಜ್ಯೋತ್ಸವ ಗೌರವ ಪ್ರಶಸ್ತಿಯನ್ನು ಪಡೆದರು.

## ಕೊಪ್ಪಳ

ದಿನಾಂಕ 2-11-2009 ರಂದು ಕೊಪ್ಪಳ ಜಿಲ್ಲಾ ಸ್ಕೌಟರ್ಸ್ - ಗೈಡರ್ಸ್ ಸಮಾವೇಶ ಕೊಪ್ಪಳದ ಹಿಂದಿ ಬಿ.ಇಡಿ. ಕಾಲೇಜಿನಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ವ್ಹಿ.ಕೆ. ಜಾಗಟಗೇರಿ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಕೆ.ಬಿ. ಬ್ಯಾಳಿ, ಶ್ರೀ ಸೈಯದ್ ಮಹಮಹದ್ ಗುತ್ತಿ, ಜಯರಾಜ್ ಬೂಸದ್, ಶ್ರೀ ಎ. ಯರ್ರಣ್ಣ ಹಾಗೂ ನಾಲ್ಕು ತಾಲೂಕಿನ ಸ್ಥಳೀಯ ಸಂಸ್ಥೆ-ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಸುಮಾರು 200ಕ್ಕೂ ಹೆಚ್ಚು ಸ್ಕೌಟರ್ಸ್/ಗೈಡರ್ಸ್ ಈ ಸಭೆಯಲ್ಲಿ ಭಾಗವಹಿಸಿದ್ದರು. ಈ ಸಭೆಯಲ್ಲಿ ಶಿಕ್ಷಕರಿಗೆ ತರಬೇತಿಗಳು, ಜಾಂಬೋರೇಟ್, ರಾಜ್ಯ ಪುರಸ್ಕಾರ ಪರೀಕ್ಷೆಗಳ ಬಗ್ಗೆ ಮಾಹಿತಿ ನೀಡಲಾಯಿತ.

# Bangalore South

### *Scout Troop & Guide Company Inaugurated at Govt. Pre. University College, New Fort, Chamarajpet*

Children's Day, the birth Day of Jawaharlal Nehru, was celebrated at the Govt. Pre-University College New Fort, Chmarajapet, Bangalore. On 14th Nov. 2009. On this occasion **Nethaji Subas Chandra Bose Prerana Scout Troop** and **Kittur Rani Channamma Spoorthi Guide Company** were inaugurated by Sri M.A. Chellaiah, Headquarters Commissioner (Publications). Sri P. Palani, District Commissioner (Scout) was the Guest.

Smt.Sowni Ponnila, Principal presided over the function and she donated 2 sets of Uniform to a Scout & a Guide, Smt. Fahim Unnisa, Senior incharge P.U.C. Section Sri Asdulla Shariff Senior incharge High School Section, all the staff members students, Scouts and Guides were present: Sri V. Krishnappa, Scout Master and Smt. B.C. Seethamma, Guide Captain Co-ordinated the Programme.

**ಮಕ್ಕಳ ದಿನಾಚರಣೆ**

ಬೆಂಗಳೂರು ದಕ್ಷಿಣ ಜಿಲ್ಲೆಯ ಆನೇಕಲ್ ತಾಲ್ಲೂಕು ಸ್ಥಳೀಯ ಸಂಸ್ಥೆಯ ವ್ಯಾಪ್ತಿಯ ಭಗತ್‌ಸಿಂಗ್ ಓಪನ್ ರೋವರ್ ತಂಡ ಹಾಗೂ ರಾಣಿ ಚೆನ್ನಮ್ಮ ರೇಂಜರ್ ತಂಡಗಳ ಸಂಯುಕ್ತ ಆಶ್ರಯದಲ್ಲಿ ದಿನಾಂಕ 14–11–2009 ರಂದು ಮಕ್ಕಳ ದಿನಾಚರಣೆ ಪ್ರಯುಕ್ತ ಆನೇಕಲ್ ಪಟ್ಟಣದ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, (ಪಂಪ್ ಹೌಸ್) ಹಾಗೂ ಜೀತ ವಿಮುಕ್ತಿ ಕರ್ನಾಟಕ ಸಂಸ್ಥೆಯವರು ನಡೆಸುತ್ತಿರುವ ಅರಳು ವಸತಿ ಸಹಿತ ಸೇತು ಬಂಧ ಕೇಂದ್ರದ ಮಕ್ಕಳಿಗೆ ದಿನವಿಡೀ ವಿವಿಧ ಕ್ರೀಡೆಗಳನ್ನು ನಡೆಸಿ ವಿಜೇತರಿಗೆ ಬಹುಮಾನಗಳನ್ನು ಸಹ ನೀಡಿ ಪ್ರೋತ್ಸಾಹಿಸಲಾಯಿತು. ಭಗತ್‌ಸಿಂಗ್ ಓಪನ್ ಸ್ಕೌಟ್ ಗ್ರೂಪಿನ ನಾಯಕರಾದ ಶ್ರೀ ಎ.ಎನ್. ನರೇಂದ್ರಕುಮಾರ್ ರವರ ನೇತೃತ್ವದಲ್ಲಿ ಪ್ರತ್ಯೇಕವಾಗಿ ನಡೆದ ಎರಡೂ ಕಾರ್ಯಕ್ರಮಗಳಲ್ಲಿ ವಿವಿಧ ಗಣ್ಯರು ಭಾಗವಹಿಸಿದ ಮಕ್ಕಳಿಗೆ ಮಕ್ಕಳ ದಿನಾಚರಣೆಯ ಮಹತ್ವದ ಜೊತೆಗೆ ಹಿತನುಡಿಗಳನ್ನು ಹೇಳಿದರು.

# Shimoga

The Shimoga District Organised the Basic Training Course for Teachers from 18th to 24th November 2009. Shimiga DIET provided funds through S.S.A. Scheme for the Training Course. The Inaugural Function was held on 18-11-2009. The following Basic Courses were organised.

| S.No. | Name of the Course | Participants | Leader |
|---|---|---|---|
| 1. | Basic Course for Scout Master | 26 | Sri M.G. Shivakumar |
| 2. | Basic Course for Guide Captain | 13 | Smt. Arunamala |
| 3. | Basic Course for Cub Master | 15 | Sri Hussaini |

Sri Kondajji B. Shanmukhappa, State Chief Commissioner in his Inaugural address requested the Zilla Panchayat to extended support to the Movement. Sri Shankarappa, Chief Planning Officer, Zilla Panchayat, in his address said the Zilla Panchayathis will try to provide Scout/Guide Uniforms to the Students. Smt.G.P. Chandramma, Deputy Director of Public Instruction (Development) and principal, District Institute of Education and Training, Sri Narayana Sastry Dist. Chief Commissioner, Sri M.A. Chellaiah, Headquarters Commissioner (Publications) addressed the participants

Smt. S.Y. Aruna Devi, Dist Commissioner (Guides) in her presidential address said she will work for the improvement of Scouting - Guiding in the District. Sri K.P. Bindu Kumar, District Secretary Welcomed the Guest and the participants. Sri Ganapathy Deputry Project Co-ordinator (SSA) and incharge Dist Commissioner(Scout) proposed the vote of thanks.

## ದಾವಣಗೆರೆ

### ಕೊಂಡಜ್ಜಿ ಬಸಪ್ಪ ವೃತ್ತದ ನಾಮಫಲಕ ಅನಾವರಣ

ದಾವಣಗೆರೆ ನಗರದ ಹದಡಿ ರಸ್ತೆಯಲ್ಲಿರುವ ಕೊಂಡಜ್ಜಿ ಬಸಪ್ಪ ವೃತ್ತದಲ್ಲಿ ನೂತನ ನಾಮಫಲಕವನ್ನು ಅನಾವರಣಗೊಳಿಸಲಾಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತ ಕೊಂಡಜ್ಜಿ ಬಿ. ಷಣ್ಮುಖಪ್ಪ ಮಾತನಾಡಿ, ಬಸಪ್ಪನವರು ತಮ್ಮ ಹುಟ್ಟೂರಾದ ಕೊಂಡಜ್ಜಿಯಲ್ಲಿ ರಾಜ್ಯಮಟ್ಟದ ಸ್ಕೌಟ್ ತರಬೇತಿ ಕೇಂದ್ರ ಸ್ಥಾಪಿಸುವ ಮೂಲಕ ಸ್ಕೌಟ್ ಚಳುವಳಿಗೆ ಮಹತ್ವದ ಕೊಡುಗೆ ನೀಡಿದ್ದಾರೆ ಎಂದು ಶ್ಲಾಘಿಸಿದರು.

ಪಾಲಿಕೆ ಉಪ ಮಹಾಪೌರ ಲೋಕೇಶ್ ನಾಮಫಲಕ ಅನಾವರಣ ಮಾಡಿದರು. ಜಿಲ್ಲಾ ಮುಖ್ಯ ಆಯುಕ್ತ ಮುರುಘ ರಾಜೇಂದ್ರ ಚಿಗಟೇರಿ, ಜಿಲ್ಲಾ ಉಪಾಧ್ಯಕ್ಷ ಮಹ್ಮದ್ ವಾಜಿಲ್, ಜಿಲ್ಲಾ ಗೈಡ್ ಆಯುಕ್ತೆ ಪುಟ್ಟಮ್ಮ ಮಹಾರುದ್ರಯ್ಯ ಜಿಲ್ಲಾ ಸ್ಥಾನಿಕ ಆಯುಕ್ತ ಬೂಸನೂರು ವಿಶ್ವನಾಥ್, ಕ.ರ.ವೇ ಪದಾಧಿಕಾರಿಗಳಾದ ವಾಸುದೇವ ರಾಯ್ಕರ್, ಸವಣೂರು ಮಲ್ಲಿಕಾರ್ಜುನ್, ಜಿಲ್ಲಾ ಕಾರ್ಯದರ್ಶಿ ಎಸ್. ಶಂಕರನಾಯ್ಕ ಉಪಸ್ಥಿತರಿದ್ದರು. ಜಿಲ್ಲಾ ತರಬೇತಿ ಆಯುಕ್ತ ಎ. ಶಿವಪ್ಪ, ಎಸ್.ಜೆ.ಎಂ.ಹೈಟೆಕ್ ಪಿಯು ಕಾಲೇಜಿನ ಕಾರ್ಯದರ್ಶಿ ದೊಗ್ಗಳ್ಳಿ ಗೌಡ್ರು ಪುಟ್ಟರಾಜು, ರೋವರ್ ಲೀಡರ್ ಎಸ್. ನಾಗರಾಜ್, ಸ್ಕೌಟ್ ಮಾಸ್ಟರ್ ಜೆ.ಎಸ್. ವಿಜಯ್ ಉಪಸ್ಥಿತರಿದ್ದರು. ಎಸ್.ಜೆ.ಎಂ. ಪಿ.ಯು ಕಾಲೇಜಿನ ರೋವರ್ ರೇಂಜರ್ಸ್ ವಿದ್ಯಾರ್ಥಿಗಳು ವಿವಿಧ ಶಾಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.

## ಮಂಡ್ಯ

ದಿನಾಂಕ 2-10-2009 ರಂದು ಮಂಡ್ಯ ಜಿಲ್ಲಾ ಕೇಂದ್ರದಲ್ಲಿ ಗಾಂಧಿ ಜಯಂತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಎಲ್ಲಾ ತಾಲ್ಲೂಕು ಸ್ಥಳೀಯ ಸಂಸ್ಥೆಯವರು ಸಹಾ ಗಾಂಧಿ ಜಯಂತಿ ಕಾರ್ಯಕ್ರಮವನ್ನು 2-10-2009 ರಂದು ಆಚರಿಸಿರುತ್ತಾರೆ. ದಿನಾಂಕ 6-10-2009 ರಿಂದ 12-10-2009 ರ ವರೆಗೆ ಮಂಡ್ಯ ತಾಲ್ಲೂಕು ಕೊತ್ತತ್ತಿ ಗ್ರಾಮದಲ್ಲಿ ಮಂಡ್ಯ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ ಸಹಯೋಗದಿಂದ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್, ಫ್ಲಾಕ್ ಲೀಡರ್ ಮತ್ತು ಕಬ್ ಮಾಸ್ಟರ್ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲಾಗಿತ್ತು. ಒಟ್ಟು 49 ಶಿಕ್ಷಕ-ಶಿಕ್ಷಕಿಯರು ಈ ಶಿಬಿರಗಳಲ್ಲಿ ಭಾಗವಹಿಸಿದ್ದರು. ದಿನಾಂಕ 1-11-2009 ರಂದು ಜಿಲ್ಲಾ ಸಂಸ್ಥೆಯು ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ 7-11-2009 ರಂದು "ಧ್ವಜ ದಿನಾಚರಣೆ" ಕಾರ್ಯಕ್ರಮವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಮಂಡ್ಯ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀಯುತ ಕೆ. ಗೋಪಾಲ್‌ರವರು ಉದ್ಘಾಟಿಸಿದರು. ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ. ಮೀರಾ ಶಿವಲಿಂಗಯ್ಯನವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ದಿನಾಂಕ 7-11-2009 ರಿಂದ 14-11-2009 ರ ವರೆಗೆ ಸ್ಕೌಟ್ ಮತ್ತು ಗೈಡ್ ಸಪ್ತಾಹವನ್ನು ಆಚರಿಸಲಾಯಿತು. ದಿನಾಂಕ 14-11-2009 ರಂದು ಈ ಸಪ್ತಾಹದ ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಗಿತ್ತು ಈ ಸಮಾರಂಭದಲ್ಲೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, ಸ್ಕೌಟ್ಸ್-ಗೈಡ್ಸ್, ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

## Bangalore North

Shivajinagar Local Association organised a Badge Work Camp and Parents get together programme at St. John's School Campus on 7th & 8th Nov 2009. Nearly 220 Scouts and Guides participated in the event. During the event, they went around Fraser Town, Colds Park, M.G. Road & Commercial Street. and raised Rs. 14,000/- towards Flood Relief Fund. The Camp was Inaugurated by Mrs. Ravi Rajkumar, Principal St. John's School. Sri Premkumar, Smt. Vanitha Narayan, District Commissioners, Sri B.K. Seshadri, District Secretary attended the event.

The objective of the Parents Meet was to invovle the Parents in the Movement Smt. Geetha Nataraj, Headquarters Commissioner (Guide) Smt. K.K. Leela, State Training Commission (Guides) were also present. Smt. B. Revathi District Training. Commissioner Co-ordinated the programme.

# International Volunteer Day

- G.C. Devaraj, L.T. (S)

5th December is International Volunteer day. It is an opportunity to thank the Volunteers from around the world who support world Scouting & Guiding through donating their time & talents in a whole variety of ways.

As 2007 marks one hundred years of the Movement, hundreds and thousands of Volunteers have strived hard to help young people make the most of the centenary to by supporting the wonderful programs & activities. The largest display of which took place at the 21st World Scout Jamboree in Hyland Park, Chelmsford, London U.K. in July & August 2007, where 10,000 Volunteers helped to plan & run a ten day event for over 30,000 young people from 163 countries.

## Coming Events at National Training Centre

| S.No. | Event / Course | Date | Venue |
|---|---|---|---|
| 1. | Quarter Master cum Campfire Leaders Course | 11th to15th Dec 2009 | National Training Centre, Pachmahri, Madya Pradesh |
| 2. | Mapping Cum Star Gazing Course | 11th to15th Dec 2009 | |
| 3. | 97th Re-Orinetation Course for Trainers (Scout Wing) | 12th to 16th Jan 2010 | |
| 4. | 91st Re-Orientation Course for Trainers (Guiding Wing) | 12th to 16th Jan 2010 | |
| 5. | 45th Pre - ALT Course (Scouting) | 18th to 22nd Jan 2010 | |
| 6. | 42nd Pre-ALT Courses for (Guide Wing) | 18th to 22nd Jan 2010 | |
| 7. | 98th Re-Orinetation Course for Trainers (Scout Wing) | 8th to 12th Feb 2010 | |
| 8. | 92nd Re-Orientation Course for Trainers (Guiding Wing) | 18th to 22nd Feb 2010 | |

*Udupi District to Host*

The 33rd State Level Cub & Bul Bul Utsav

**The 33rd State Level Cub & Bul Bul Utsav will be held at Silas International School Campus from 27th to 31st December 2009 at Udupi. The District Association of Bharat Scouts & Guides, Udupi District will Host the State Level Event.**

## 26th Jamborettee of Karnataka State is Postponed

# ಭಕ್ತಿಮಾರ್ಗ

- ಗೊ.ರು. ಚನ್ನಬಸಪ್ಪ

ಮಾನವನಲ್ಲಿ ಕಂಡು ಬರುವ ಸಂವೇದನೆಗಳಲ್ಲಿ ಒಂದು ಭಕ್ತಿ. ಈ ಭಕ್ತಿಯನ್ನು ಕೇವಲ ದೈವಶ್ರದ್ಧೆಗಷ್ಟೇ ಸೀಮಿತಗೊಳಿಸಿರುವ ಕಾರಣ, ಮುಕ್ತಿಯ ಕೇವಲ ಮಾರ್ಗ ಎಂದು ಅಲೌಕಿಕಗೊಳಿಸಿರುವ ಕಾರಣ, ಅದು ಇಂದಿನ ವ್ಯಾವಹಾರಿಕ ಜಗತ್ತಿನ ಪ್ರದರ್ಶನ–ಪ್ರಚಾರಗಳ ಅಬ್ಬರದಲ್ಲಿ ಒಂದು ಅಸಂಗತ ವಿಚಾರವೆನಿಸಿದೆ; ಸಲ್ಲದ ನಾಣ್ಯವೆನಿಸಿದೆ.

ಆದರೆ ಭಕ್ತಿಯ ಅರ್ಥ ಮತ್ತು ವ್ಯಾಪ್ತಿ ಹೀಗೆ ಯಾವುದೇ ದೇವರು, ಧರ್ಮ ಅಥವಾ ಆಧ್ಯಾತ್ಮಗಳಿಗೇ ಸೀಮಿತವಾದುದಲ್ಲ. ಭಕ್ತಿ ಎಂದರೆ ಕಣ್ಣುಮುಚ್ಚಿ ಕೈಮುಗಿದು ಧ್ಯಾನ ಮಾಡುವುದಲ್ಲ, ಮಡಿಯುಟ್ಟು ಗುಡಿಗೆ ಹೋಗಿ, ಅಲ್ಲಿರುವ ಮೂರ್ತಿಗೆ ನೀರೆರೆದು, ಹೂ–ಪತ್ರೆಗಳಿಂದ ಪೂಜಿಸಿ, ಹಣ್ಣು–ಕಾಯಿ ನೈವೇದ್ಯ ಮಾಡವುದಲ್ಲ; ಅನಿಷ್ಟ ನಿವರಣೆಗೆಂದೋ, ಅಧಿಕಾರ ಪ್ರಾಪ್ತಿಗೆಂದೋ ಹೋಮ ಹವನ ಮಡುವುದಲ್ಲ; ಪುಣ್ಯ ಸಂಪಾದನೆಗೆಂದು ತೀರ್ಥಯಾತ್ರೆಗೆ ಹೋಗುವುದಲ್ಲ; ಒಂಟಿಯಾಗಿಯೋ, ಒಟ್ಟಾಗಿಯೋ ಮಾಡುವ ಭಜನೆಯೂ ಅಲ್ಲ.

ಇವೆಲ್ಲ ಬಹಿರಂಗದ ಆಚರಣೆಗಳು; ಸಂಪ್ರದಾಯದ ಶ್ರದ್ಧೆಗಳು; ಕೆಲವು ಸಂದರ್ಭಗಳಲ್ಲಂತೂ ಯುಕ್ತಿಗಳು. ವಾಸ್ತವವಾಗಿ ಭಕ್ತಿ ಎನ್ನುವುದು ಶಿಸ್ತು. ಭಕ್ತನ ಆಚರಣೆಯಲ್ಲ; ಅದು ಅಂತರಂಗದ ಶಿಸ್ತು. ಭಕ್ತನ ವಿಶೇಷವೆಂದರೆ ಸಕಲ ಜೀವರಾಶಿಗಳನ್ನೂ ತನ್ನಂತೆ ಭಾವಿಸುವುದು; ಮಾಡುವ ಕರ್ತವ್ಯವನ್ನು ಶ್ರದ್ಧಾನಿಷ್ಠೆಗಳಿಂದ ಮಾಡುವುದು; ಅನ್ಯಾಯ ಅಸಂಗತಗಳ ವಿರುದ್ಧ ನಿರ್ದಾಕ್ಷಿಣ್ಯದಿಂದ ನಿಲ್ಲುವುದು. ಭಕ್ತನ ಆಸ್ತಿ–ಅವನ ಆತ್ಮಶಕ್ತಿ; ಅವನು ನಡೆಯುವ ಹಾದಿ–ಸಾತ್ವಿಕ ಹಾದಿ. ಅವನ ಗುರಿಯೆಲ್ಲ ಲೋಕ ನೆಮ್ಮದಿ.

ಇಂದು ಜಗತ್ತಿನಾದ್ಯಂತ ನಡೆಯುತ್ತಿರುವ ವಿದ್ಯಮಾನಗಳನ್ನು ನಾವೆಲ್ಲ ಗಮನಿಸುತ್ತಿದ್ದೇವೆ. ವಿಶ್ವದ ಯಾವುದೇ ಪ್ರದೇಶ ಅಥವಾ ರಾಷ್ಟ್ರ ನೆಮ್ಮದಿಯಿಂದ ಇದೆ ಎಂದು ಹೇಳುವಂತಿಲ್ಲ. ಇಡೀ ಮಾನವ ಸಮುದಾಯ ಸಂಶಯ ಮತ್ತು ಭಯಗಳ ಸುಳಿಗೆ ಸಿಕ್ಕಿಕೊಂಡಂತಿದೆ. ಈಗ ಎಲ್ಲಿ ನೋಡಿದರೂ ರಾಜಕೀಯ ಅಸ್ಥಿರತೆ, ಜನಾಂಗೀಯ ಕಲಹ, ಶಸ್ತ್ರಾಸ್ತ್ರ ಘರ್ಷಣೆ, ಆರ್ಥಿಕ ಅಭದ್ರತೆ, ಕೌಟುಂಬಿಕ ಅಭದ್ರತೆಗಳ ರುದ್ರತಾಂಡವ ನಡೆದಿರುವುದನ್ನು ಕಾಣುತ್ತೇವೆ. ಜೊತೆಗೆ ನಿಸರ್ಗದ ಮುನಿಸಿನಿಂದ ಈಗ ಪ್ರತಿನಿತ್ಯ ಕಂಡುಕೇಳುತ್ತಿರುವ ಪ್ರವಾಹ, ಭೂಕಂಪ, ಬಿರುಗಾಳಿ, ಬರಗಾಲ, ಹಿಮಪಾತ ಸಮುದ್ರಸ್ಫೋಟ– ಇವುಗಳ ಹಾವಳಿ ಬೇರೆ.

ತಜ್ಞರು ವಿಚಾರಮಾಡಿರುವಂತೆ ಈ ನಿಸರ್ಗದ ಮುನಿಸಿನಿಂದಾಗುವ ದುಷ್ಪರಿಣಾಮಗಳಿಗಿಂತ ರಾಜಕೀಯ ಅನಿಷ್ಟ, ಜನಾಂಗೀಯ ದ್ವೇಷ, ಯುದ್ಧ ಮತ್ತು ಭಯೋತ್ಪಾದನೆ, ಮಾದಕ ದ್ರವ್ಯಗಳ ಹಾವಳಿ, ಅಸಂಗತ ಧಾರ್ಮಿಕ ನಂಬಿಕೆಗಳು – ಇವುಗಳಿಂದಾಗುವ ಅನಾಹುತವೇ ಹೆಚ್ಚು ಭೀಕರವಾದುದು.

ಇವುಗಳ ಪರಿವೆಯಿಲ್ಲದೆ ನಾವು ನಾಗರೀಕತೆಯ ಹುಚ್ಚಿನಲ್ಲಿ ಅದರ ಬೆನ್ನು ಹತ್ತಿದ್ದೇವೆ. ಆಧುನಿಕತೆಯ ಅವಸರದಲ್ಲಿ ಅನುಕರಣೆಯ ಆಕರ್ಷಣೆಯಲ್ಲಿ ನಾವು ಅತ್ಯಂತ ಶಕ್ತಿಯುತವಾದ, ನಮ್ಮೊಳಗೇ ಇರುವ ಭಕ್ತಿಮಾರ್ಗವನ್ನು ಉಪೇಕ್ಷಿಸಿದ್ದೇವೆ. ನಾಗರಿಕತೆ ಬೆಳೆಯಬೇಕೇನೋ ನಿಜ. ಆದರೆ ಅದು ಸಂಸ್ಕೃತಿಯ ನೆಲಗಟ್ಟಿನ ಮೇಲೆ ಬೆಳೆಯಬೇಕು. ಲೆಬರ್ ಎಂಬ ತತ್ತ್ವಜ್ಞಾನಿ ಹೇಳುವಂತೆ. **Civilization is based on materialism, but the Culture consists of ideals and values** – ನಾಗರಿಕತೆ ಭೌತಿಕವಸ್ತುಗಳ ಆಧಾರದ ಮೇಲೆ ನಿಂತಿದೆ; ಆದರೆ ಸಂಸ್ಕೃತಿ ಆದರ್ಶ ಮತ್ತು ಮೌಲ್ಯಗಳಿಂದ ತುಂಬಿದೆ.

ನಾಗರಿಕತೆ ಒಂದು ರೀತಿಯಲ್ಲಿ ಯಾವುದೇ ಪ್ರಯತ್ನವಿಲ್ಲದೆ ಬೆಳೆಯಲು ಸಾಧ್ಯವಿದೆ. ಅದೊಂದು ರೀತಿಯ ಅನುಕರಣೆ. ಆದರೆ ಸಂಸ್ಕೃತಿ ಹಾಗಲ್ಲ. ನಾಗರಿಕತೆಯನ್ನು ಬೇಕಾದರೆ ಕೊಂಡು ಅಥವಾ ಸಾಲ ತರಬಹುದೆಂದು ಸಮಾಜ ತಜ್ಞರು ಹೇಳುತ್ತಾರೆ. ಆದರೆ ಸಂಸ್ಕೃತಿಗೆ ಸಾಧನೆ ಬೇಕು. ನಾಗರಿಕತೆ ವ್ಯಕ್ತಿಗಾಗಲೀ ಸಮಾಜಕ್ಕಾಗಲೀ ಎಂದೂ ನೆಮ್ಮದಿ ನೀಡಿಲ್ಲ ಎಂಬುದಕ್ಕೆ ಇತಿಹಾಸದಲ್ಲೇ ಸಾಕಷ್ಟು ನಿದರ್ಶನಗಳಿವೆ. ಆದರೆ ಸಂಸ್ಕೃತಿ ಎಂದೆಂದಿಗೂ ಶಾಂತಿ ಮತ್ತು ನೆಮ್ಮದಿಗಳನ್ನು ರಕ್ಷಿಸಿಕೊಂಡೇ ಬಂದಿದೆ.

ಈ ಸಂಸ್ಕೃತಿಯ ಮೂಲಾಧಾರವೇ ಭಕ್ತಿ. ಅದರ ಮುಖ್ಯ ಆಶಯವೇ ಸಾತ್ವಿಕ ವ್ಯಕ್ತಿ ನಿರ್ಮಾಣ; ಆ ಮೂಲಕ ಸಮರ್ಥ ಸಮಾಜ ನಿರ್ಮಾಣ. ಲೋಕದ ಎಲ್ಲ ಸಮಸ್ಯೆಗಳು ಆರಂಭವಾಗುವುದೇ ವ್ಯಕ್ತಿಯಿಂದ. ವ್ಯಕ್ತಿಯ ಹಾರೈಕೆ–ಹಂಬಲಗಳು, ಕನಸು–ಕಲ್ಪನೆಗಳು, ಬಯಕೆ–ಭರವಸೆಗಳು ಆಘಾತಕ್ಕೆ ಈಡಾದಾಗ, ಅವನ ಉದ್ವೇಗ–ಹತಾಶತೆಗಳು, ಕಣ್ಣೀರು–ನಗೆಗಳು ಅಲಕ್ಷ್ಯಕ್ಕೆ ಒಳಗಾದಾಗ, ಹಾಗೆಯೇ ಅವನ ಅಧಿಕಾರ–ಅಹಂಕಾರಗಳು, ಅಂಚು ಮುಟ್ಟಿದಾಗ ಸಮಾಜದ ಸ್ವಾಸ್ಥ್ಯ ಕೆಡುತ್ತದೆ.

ಈ ಯಾವ ಅವಾಂತರಕ್ಕೂ ಅವಕಾಶವಿಲ್ಲದಿರಬೇಕಾದರೆ ವ್ಯಕ್ತಿ ಭಕ್ತಿಮಾರ್ಗ ಹಿಡಿಯಬೇಕು. ಭಕ್ತಿ ನಮ್ಮಲ್ಲಿ ಸಂಕಲ್ಪಶಕ್ತಿಯನ್ನು, ಸಮಷ್ಟಿ ದೃಷ್ಟಿಯನ್ನು ಬೆಳೆಸುತ್ತದೆ. ಕಾರ್ಯಶ್ರದ್ಧೆ ಮತ್ತು ಶಾಂತಿ–ಸಹನೆಗಳನ್ನು ಮೈಗೂಡಿಸುತ್ತದೆ. ಭಕ್ತಿ ಅಸಹಾಯಕತೆ ಅವಸ್ಥೆಯಲ್ಲ; ಅದು ಜೀವನ ವಿಶ್ವಾಸ!

...............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 2 **ಕಾರ್ಯಸರಣಿ** ಶಿಬಿರಾಗ್ನಿ ಉದಂತ ಸಂ – 5

## ನಿಮ್ಮ ಸಾಹಸಯಾನದ ಉದ್ದೇಶ

ಈ ನಿಮ್ಮ ವಿಶೇಷ ಸಾಹಸಯಾನಕ್ಕೆ ಏನಾದರೊಂದು ಉದ್ದೇಶವಿರಬೇಕು. ಉದಾಹರಣೆಗೆ ನಿಮ್ಮ ಪೆಟ್ರೋಲ್‌ನವರು ನಗರ ಪ್ರದೇಶದವರಾದರೆ, ಒಂದು ವಿಶೇಷ ಆಕರ್ಷಕ ಸ್ಥಳ – ಪರ್ವತ ಪ್ರದೇಶ/ಹೆಸರಾಂತ ಸರೋವರ/ಪುರಾತನ ಕೋಟೆಮನೆ (ಅಚಿಣಟಚಿ) ರಣರಂಗ ಅಥವಾ ಸಮುದ್ರತೀರ ಇವುಗಳನ್ನು ನೋಡುವ ಉದ್ದೇಶದಿಂದ ಹೊರಟಿರುತ್ತೀರಿ ಅಥವ ಒಂದು ದೊಡ್ಡ ಶಿಬಿರದಲ್ಲಿ ಭಾಗವಹಿಸಲಿರುವ ಇತರರೊಡನೆ ಸೇರಿಕೊಳ್ಳಲು ಹೊರಟಿರುತ್ತೀರಿ.

ಹಾಗಲ್ಲದೆ, ನೀವು ಗ್ರಾಮಾಂತರ ಪ್ರದೇಶದ ಪೆಟ್ರೋಲ್‌ನವರಾದರೆ ಸಮೀಪದ ದೊಡ್ಡ ನಗರಕ್ಕೆ ಭೇಟಿಕೊಟ್ಟು ಅಲ್ಲಿನ ಸುಂದರ ಕಟ್ಟಡಗಳು, ಮೃಗಾಲಯಗಳು, ದೇವಾಲಯಗಳು, ವಸ್ತು ಸಂಗ್ರಹಾಲಯಗಳು ಇತ್ಯಾದಿ ಸ್ಥಳಗಳನ್ನು ನೋಡಬಯಸುತ್ತೀರಿ.

ನೀವು ನಿಮ್ಮ "ಪ್ರತಿನಿತ್ಯದ ಉಪಕಾರ"ವನ್ನು ಅವಕಾಶವೊದಗಿದಂತೆ ಮಾಡಿ ತೀರುವುದು ಸರಿಯೇ ಸರಿ. ಅದರ ಜೊತೆಗೆ ನಿಮ್ಮ ಉಪಯೋಗಕ್ಕಾಗಿ ಸ್ಥಳವನ್ನು ಬಿಟ್ಟುಕೊಟ್ಟ ರೈತರು ಅಥವಾ ಇತರರಿಗೆ ಕೃತಜ್ಞತಾಪೂರ್ವಕವಾಗಿ ಪ್ರತ್ಯುಪಕಾರವನ್ನು ಮಾಡಬೇಕಾಗುತ್ತದೆ.




*ಒಬ್ಬ ಜಾಣ ಸ್ಕೌಟು, ತನ್ನ ಪರಿಶೋಧನಾ ದಿನಚರಿ ಪುಸ್ತಕದಲ್ಲಿ ಈ ಚಿತ್ರಗಳನ್ನು ಬಿಡಿಸಿದ್ದನು.*

## ಪರ್ವತಾರೋಹಣ

ವಿಶ್ವದ ಅನೇಕ ಭಾಗಗಳಲ್ಲಿ ಪರ್ವತಾರೋಹಣವು ಒಂದು ಮಹತ್ವದ ಕ್ರೀಡೆಯಾಗಿದೆ.

ಪರ್ವತ ಪ್ರದೇಶದಲ್ಲಿ ದಾರಿಯನ್ನು ಕಂಡುಕೊಂಡು, ಸೌಖ್ಯದಿಂದ ವಾಸಿಸ ಬೇಕಾದರೆ, ನೀವು ಎಲ್ಲಾ ಸ್ಕೌಟ್ ಕೌಶಲ್ಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಬೆಟ್ಟಗಳನ್ನು ಹತ್ತುವಾಗ, ನೀವು ಒಂದೇ ಸಮನೆ ದಿಕ್ಕುಗಳನ್ನು ಬದಲಾಯಿಸುತ್ತಿರುತ್ತೀರಿ, ಏಕೆಂದರೆ ಗಿರಿ ಕಂದರಗಳಲ್ಲಿ – ಆ ಪ್ರದೇಶ ಉಬ್ಬುಗಳಲ್ಲಿ ಕ್ರಮಿಸುವಾಗ ನಿಮಗೆ ಸಹಾಯಕವಾಗಿದ್ದ, ಮಾರ್ಗದರ್ಶಕವಾಗಿದ್ದ, ಹೆಗ್ಗುರುತು ಇದ್ದಕ್ಕಿದ್ದಂತೆ ಮಾಯವಾಗುತ್ತದೆ. ಸೂರ್ಯನ ಸಹಾಯದಿಂದಲೋ, ದಿಕ್ಸೂಚಿಯ ಸಹಾಯದಿಂದಲೋ ನಿಮ್ಮ ದಿಕ್ಕನ್ನು ಕಂಡುಕೊಳ್ಳಬೇಕಾಗುತ್ತದೆ. ನೀವು ಕ್ರಮಿಸಬೇಕಾದ ದಿಕ್ಕು ಮತ್ತು ದೂರಗಳನ್ನು ಮತ್ತೆ ಮತ್ತೆ ಅಂದಾಜು ಮಾಡುತ್ತಲೇ ಇರಬೇಕಾಗುತ್ತದೆ.

ಸ್ಥಳ ಪರಿಚಿತರಿಗೂ ದಿಕ್ಕು ತೋಚದಂತೆ ಆಗುವ ಸಂದರ್ಭಗಳು ಒದಗಿಬರುತ್ತವೆ. ಉದಾಹರಣೆಗೆ ಮಂಜುಕವಿಯುವುದು. ಇಬ್ಬನಿ ಸುರಿಯುವುದು ಇತ್ಯಾದಿ ಆದಾಗ, ಆ ಪ್ರದೇಶದ ಸೂಕ್ಷ್ಮ ಪರಿಚಯವಿರುವವರ ಅಂದಾಜು ಸಹ ಅಸ್ತವ್ಯಸ್ತವಾಗುತ್ತದೆ.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine


## ಬಿ.ಬಿ. ಅವರ ನಲ್ನುಡಿ

· ದೇವರು ನಿಮಗೆ ಬದುಕಲು ಎಲ್ಲವನ್ನು ಕೊಟ್ಟಿದ್ದಾನೆ. ಇದಕ್ಕೆ ಬದಲಾಗಿ ನೀವು ದೇವರಿಗೆ ಏನನ್ನಾದರೂ ಕೊಡಬೇಕು. ಇದುವೇ ದೇವರಿಗೆ ನೀವು ಮಾಡುವ ಕರ್ತವ್ಯ.

· ನಮ್ಮ ದೇಶ ನನಗಿಂತಲೂ ಮೊದಲು ಎಂಬುದು ನಿಮ್ಮ ಧ್ಯೇಯವಾಗಿರಬೇಕು.

· ಒಂದು ರಾಷ್ಟ್ರದ ಚಾರಿತ್ರ್ಯವು ವ್ಯಕ್ತಿಗತ ಚಾರಿತ್ರ್ಯವನ್ನು ಅವಲಂಬಿಸಿರುತ್ತದೆ.

· ಸ್ನೇಹಿತರಿಗೆ ಮಾತ್ರವಲ್ಲದೆ, ಅಪರಿಚಿತರಿಗೂ, ಶತ್ರುಗಳಿಗೂ ಸಮಯ ಬಂದಾಗ ನೀವು ಸಹಾಯ ಮಾಡಬೇಕು.

· ಎಲ್ಲರಿಗೂ ಸಮಾನ ಅವಕಾಶ ನೀಡುವುದು ಒಂದು ಉದ್ದೇಶವಾದರೆ, ವಿಧಿ ವಂಚಿತರಿಗೆ ಅವಕಾಶ ನೀಡಿ ಸಹಾಯ ಮಾಡುವುದು ಮತ್ತೊಂದು ಉದ್ದೇಶವಾಗಿದೆ.

· ಖಜಕಔಖಖಃಐಇನಿಂದ ಖ ಮತ್ತು ಒ ನ್ನು ಬಲವಂತವಾಗಿ ಹೊರಹಾಕಿ. ಹೀಗೆ ಮಾಡಿದಿರಾದರೆ ಖಂಡಿತವಾಗಿಯೂ ನಿಮಗೆ ಬೇಕಾದುದನ್ನು ಸಾಧಿಸಲು ಸಾಧ್ಯವಾಗುತ್ತದೆ.

· ಸೌಂದರ್ಯವನ್ನು ಮೆಚ್ಚದ ಜೀವನ ಮೋಡ ಮುಸುಕಿದ ದಿನದಂತೆ ನೀರಸವಾಗಿರುತ್ತದೆ.


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227





**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



ದಿನಾಂಕ 20-11-2009ರಂದು ಭಟ್ಕಳದಲ್ಲಿ ನಡೆದ ಜಿಲ್ಲಾ ಮಟ್ಟದ ರ್‍ಯಾಲಿಯನ್ನು ಶ್ರೀ ಜೆ.ಡಿ. ನಾಯ್ಕ ಮಾನ್ಯ ಶಾಸಕರು ಉದ್ಘಾಟಿಸಿದರು ಶ್ರೀ ಕೊಂಡಜ್ಜಿ. ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಡಾ॥ ಜಿ.ಜಿ. ಸಭಾಹಿತ್ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ದೇವಿದಾಸ ಮೋಗೇರ, ಕ್ಷೇತ್ರ ಶಿಕ್ಷಣಾಧಿಕಾರಿ ಹಾಗು ಜಿಲ್ಲೆಯ ಪದಾಧಿಕಾರಿಗಳನ್ನು ಕಾಣಬಹುದು.




ಶಿವಮೊಗ್ಗ ಜಿಲ್ಲೆ ಹಾಗೂ ಡಯಟ್ ಇವರ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಳ್ಳಲಾಗಿದ್ದ ಮೂಲ ತರಬೇತಿ ಶಿಬಿರವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ. ಬಿ. ಷಣ್ಮುಖಪ್ಪ ಉದ್ಘಾಟಿಸಿದರು. ಶ್ರೀ ಟಿ.ವಿ. ನಾರಾಯಣಶಾಸ್ತ್ರಿ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಎಸ್.ವೈ. ಅರುಣಾದೇವಿ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಶಂಕರಪ್ಪ, ಜಿಲ್ಲಾ ಪಂಚಾಯತ್ ಮುಖ್ಯಯೋಜನ ಅಧಿಕಾರಿ ಮತ್ತು ಶ್ರೀಮತಿ ಜೆ.ಪಿ. ಚಂದ್ರಮ್ಮ ಪ್ರಚಾರ್ಯರು ಡಯಟ್ ಇವರುಗಳನ್ನು ಕಾಣಬಹುದು.



ದಿನಾಂಕ 14-11-2009ರಂದು ಬೆಂಗಳೂರು ದಕ್ಷಿಣ ಜಿಲ್ಲೆ ಚಾಮರಾಜ ಪೇಟೆಯ ನೂತನ ಕೋಟೆ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳನ್ನು ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ. ಎಂ.ಎ. ಚೆಲ್ಲಯ್ಯನವರು ಉದ್ಘಾಟಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಸೌನಿ ಪೊನ್ನಿಲಾ, ಮತ್ತು ಜಿಲ್ಲಾ ಆಯುಕ್ತರು (ಸ್ಕೌಟ್) ಪಿ. ಪಳನಿ ಹಾಗೂ ಕಾಲೇಜಿನ ಮುಖ್ಯಸ್ಥರುಗಳನ್ನು ಕಾಣಬಹುದು.



ಉತ್ತರ ಕನ್ನಡ ಜಿಲ್ಲೆಯ ಮಾರ್ಥೋಮಾ ಶಾಲೆಯ ಸ್ಕೌಟ್ಸ್ ಮತ್ತು ಗೈಡ್‌ಗಳು ಜೋಗ ಜಲಪಾತಕ್ಕೆ ಹೊರ ಸಂಚಾರ ಕೈಗೊಂಡಿರುವುದು.




ಹಾಸನ ಜಿಲ್ಲೆಯ ಸ್ಕೌಟ್ ಭವನದಲ್ಲಿ ಜರುಗಿದ ಕಬ್, ಬುಲ್‌ಬುಲ್‌ಗಳ ಪಟ್ಕನಾಯಕರ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಅರವಿಂದ ವಿದ್ಯಾಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಮತಿ ತುಳಸಿ ವಿಠಲ್ ಅಧ್ಯಕ್ಷತೆ ವಹಿಸಿದ್ದರು ಚಿತ್ರದಲ್ಲಿ ಜಿಲ್ಲಾ ಪದಾಧಿಕಾರಿಗಳನ್ನೂ ಕಾಣಬಹುದು.



ಬಳ್ಳಾರಿಯಲ್ಲಿ ನಡೆದ ಸ್ಕೌಟ್ ಗೈಡ್ ಶಿಕ್ಷಕರ ಸಮಾವೇಶದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆಂಪರಂಗಯ್ಯ ಮಾತನಾಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶೀ ಆರ್. ವೆಂಕಣ್ಣ ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶೀ. ವಿ.ಟಿ. ದಶಮೂರ್ತಿ ಅವರುಗಳನ್ನು ಕಾಣಬಹುದು.

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West Posted at: Bangalore City H.P.O. on 30-11-2009



*Gatherings of Scouters, Guiders, Scouts & Guides at the Dist. Rally held at Islamia Anglo Urdu High School Campus, Bhatkal, Uttara Kannada District. on 20.11.2009*



*Gatherings of Scouters, Scouts & Guides at the Dist. Rally held at Sri B.V.V.S. School Campus, Bagalkote on 14th November 2009*



*Scouts of Govt. High School, Vishwanatha pura, Bangalore Rural Dist. at the Trekking Camp held on 7.11.2009*



*Rovers of Subhas Chandra Bose Rover Crew, Muddebihal, Bijapur District rendering Community Service at Jalapura and Nalathawada Villages.*



*Scout Official of Gulbarga Dist. Distibuting Relief Materials at Vellundigi Village on 13.10.2009*



**If not delivered, please return to :**

**THE EDITOR**, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase, West of Chord Road,
Mahalakshmipuram, Bangalore-560086.

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sat[illegible]asri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.

visit our website "www.[illegible].org.in" for details of Scout/Guide activities & On-line Karnataka Scout & Guide Magazine